ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ

# ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ

ಸಂಪುಟ–೧

ಸಂಪಾದಕರು :

ಕೆಳದಿ ಗುಂಡಾ ಜೋಯಿಸ್

ನಾ. ಗೀತಾಚಾರ್ಯ



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

1987

KANNADA HASTAPRATIGALA VARNANATMAK
SOOCHI (Descriptive Catalogue of Kannada Palmle
Manuscripts); Editors : Keladi Gunda Jois & Na. Geethachar

Published By B.M. Sri Memorial Foundation, 54, 3rd Cros
Gavipuram Extn., Bangalore 560019.

Pages : 134 + xiv Price Rs. 20-00

First Impression : 1987



Published with the Financial Assistance from the Nation
Archives of India, Department of Culture, Govt. of India

ಬೆಲೆ : ಇಪ್ಪತ್ತು ರೂಪಾಯಿಗಳು

ಮುದ್ರಕರು :

ನೇತ್ರಾ ಪ್ರಿಂಟರ್ಸ್
6ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು–18

# ಮುನ್ನುಡಿ

ಭಾರತ ಸರ್ಕಾರ ಈಗ ಕೆಲವು ವರ್ಷಗಳಿಂದ ತನ್ನ ಸಂಸ್ಕೃತಿ ಇಲಾಖೆಯು (Department of Culture) ಮೂಲಕ ಅಭಿನಂದನೀಯವಾದ ಅತ್ಯವಶ್ಯವಾದ ಹಾಗೂ ಬಹು ಮುಖ್ಯವಾದ ಒಂದು ಯೋಜನೆಯನ್ನು ರೂಪಿಸಿ, ಜಾರಿಗೆ ತಂದಿದೆ. ಪ್ರಾಚೀನ ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣ ಮತ್ತು ಪ್ರಕಟನ ಕಾರ್ಯಗಳಲ್ಲಿ ನಿರತವಾದ ಸ್ವಾಯತ್ತ ಸಂಸ್ಥೆಗಳಿಗೆ ಪ್ರತಿವರ್ಷ ಅನುದಾನ ನೀಡುವುದಕ್ಕೆ ಸಂಬಂಧಪಟ್ಟದ್ದು ಆ ಯೋಜನೆ.

ಪ್ರಾಚ್ಯ ವಸ್ತುಗಳು ಅನೇಕ ಬಗೆಯುವು. ಪ್ರಾಚೀನ ಕಾಲದ ಲೋಹ ಮತ್ತು ಮರಗಳಿಂದ ಮಾಡಿದ ವಿಗ್ರಹಗಳು, ಚಿತ್ರಪಟಗಳು, ನಾಣ್ಯಗಳು, ತಾಮ್ರಶಾಸನ ಫಲಕಗಳು, ಮುಂತಾದವು ಪ್ರಾಚ್ಯವಸ್ತುಗಳು ಎನ್ನಿಸಿಕೊಳ್ಳುತ್ತವೆ. ಈ ಪ್ರಾಚ್ಯ ವಸ್ತುಗಳಲ್ಲಿ ಹಿಂದಿನ ಕಾಲದ ಓಲೆಗರಿಯ ಮತ್ತು ಕಾಗದದ ಹಸ್ತಪ್ರತಿಗಳೂ ಸೇರುತ್ತವೆ. ಈ ಯಾವುದೇ ವಸ್ತು ಪ್ರಾಚೀನ ಎನ್ನಿಸಿಕೊಳ್ಳಬೇಕಾದರೆ, ಕಡೆಯ ಪಕ್ಷ ಅದು ಒಂದು ನೂರು ವರ್ಷಗಳಷ್ಟಾದರೂ ಹಳೆಯದಾಗಿರಬೇಕು ಎಂದು ಪ್ರಾಚ್ಯ ವಸ್ತು ಸಂರಕ್ಷಣ ಸಂಬಂಧವಾಗಿ ಕಾನೂನು ಮಾಡಿದಾಗ ಭಾರತ ಸರ್ಕಾರ ನಿಗದಿ ಮಾಡಿದೆ. ಇನ್ನು ಹನ್ನೆರಡು ವರ್ಷ ಸಂದರೆ, ಈ ಶತಮಾನ ಮುಗಿದಮೇಲೆ, ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗಿನ ಎಲ್ಲ ಹಸ್ತಪ್ರತಿಗಳೂ ಪ್ರಾಚ್ಯ ವಸ್ತುಗಳು ಎನ್ನಿಸಿಕೊಳ್ಳುತ್ತವೆ. ಹೀಗಿರುತ್ತ, ಸದ್ಯದ ಮಟ್ಟಿಗೆ ಆ ಗಡುವಿನವರೆಗಿನ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂರಕ್ಷಿಸುವುದು ನಮ್ಮ ಪವಿತ್ರ ಕರ್ತವ್ಯವಾಗಿರುತ್ತದೆ.

ಕರ್ನಾಟಕದ ಅರಮನೆ ಗುರುಮನೆಗಳ ಶಾಸ್ತ್ರಭಕ್ತಿ, ಭಾಷಾಸಾಹಿತ್ಯ ಪ್ರೇಮ ಇವುಗಳಿಂದಾಗಿ ಶಾಸ್ತ್ರಗ್ರಂಥಗಳ ಮತ್ತು ಸಾಹಿತ್ಯಗ್ರಂಥಗಳ ಸಂಗ್ರಹಣ ಸಂರಕ್ಷಣ ಕಾರ್ಯಗಳು ಪ್ರಾಚೀನ ಕಾಲದಿಂದಲೂ ನಡೆದು ಬರುತ್ತಿದೆ. ಹಾಗಿಲ್ಲದೆ ಹೋಗಿದ್ದರೆ, ಈ ಶ್ರೀಮಠಗಳಲ್ಲಿ, ಖಾಸಗಿ ಸಂಗ್ರಹಾಲಯಗಳಲ್ಲಿ, ಹಳ್ಳಿಹಳ್ಳಿಗಳಲ್ಲೂ ಜಾತಿಮತ ಭೇದವನ್ನೆಣಿಸದೆ ಸರಸ್ವತೀ ಆರಾಧನೆ (ಹಸ್ತಪ್ರತಿಸಂರಕ್ಷಣ ಸರಸ್ವತೀ ಆರಾಧನೆಯೆ) ಯಲ್ಲಿ ನಿರತರಾದ ಗ್ರಂಥಭಕ್ತರ ಮನೆಗಳಲ್ಲಿ ಸಹಸ್ರ ಸಹಸ್ರ ಸಂಖ್ಯೆ ತಾಡಪತ್ರ ಹಸ್ತಪ್ರತಿಗಳು ಉಳಿದುಬರುತ್ತಲೇ ಇರಲಿಲ್ಲ. ಇದು ನಮ್ಮ ನಾಡಿನ ಪುಣ್ಯ. ಆದರೆ, ಈ ಗ್ರಂಥಭಕ್ತಿ ಮೂಢಭಕ್ತಿಯಲ್ಲಿ ಪರ್ಯವಸಾನವಾಗಿ ಹಸ್ತಪ್ರತಿಗಳು ಕುಂಕುಮಾರ್ಚನೆ, ಗಂಧಲೇಪನ, ಕ್ಷೀರಾಭಿಷೇಚನ ಇವುಗಳಿಂದಾಗಿ ನಿರುಪಯುಕ್ತವಾಗಿ ಪರಿಣಮಿಸಿರುವ

ಸಂದರ್ಭಗಳೂ ಉಂಟು. ಬರುಬರುತ್ತ, ಪ್ರಾಚೀನರು ಹಸ್ತಪ್ರತಿ ಸಂರಕ್ಷಣೆಯಲ್ಲಿ ವಹಿಸುತ್ತಿದ್ದ ಶ್ರದ್ಧೆ ಪರಿಶ್ರಮಗಳು ಮಾಯವಾಗಿ, ಸಾಮಾನ್ಯ ಜನರ ವರ್ಗದಲ್ಲಿ ಮಾತ್ರವಲ್ಲ, ಮಠಗಳಂತಹ ಪವಿತ್ರ ಸ್ಥಳಗಳಲ್ಲಿಯೂ ಹಸ್ತಪ್ರತಿಗಳು ನಷ್ಟವಾಗಿವೆ, ಇಲ್ಲವೆ ನಷ್ಟಪ್ರಾಯವಾಗಿವೆ.

ಬಹಳ ಪ್ರಾಚೀನ ಕಾಲದಲ್ಲಿ ಅಮೂಲ್ಯ ಹಸ್ತಪ್ರತಿಗಳು ವಿದೇಶ ಪ್ರಯಾಣ ಮಾಡಿರುವುದೂ ಉಂಟು. ಈಚಿನ ದಿನಗಳಲ್ಲಿ ದೇವತಾವಿಗ್ರಹಗಳು, ಅಪೂರ್ವ ವರ್ಣ ಚಿತ್ರಗಳು, ನಾಣ್ಯಗಳು, ಐತಿಹಾಸಿಕ ಸ್ಮಾರಕ ವಸ್ತುಗಳು ಮುಂತಾದವುಗಳು ಪರ ದೇಶಗಳ ಸಂಗ್ರಹಕಾರರು ತೋರುವ ಹಣದಾಸೆಗಾಗಿ ನಡೆಯುವ ಕಳ್ಳಸಾಗಾಣಿಕೆಯಲ್ಲಿ ದೇಶದಿಂದ ಕಣ್ಮರೆಯಾಗುತ್ತಿರುವಂತೆ ಹಸ್ತಪ್ರತಿಗಳೂ ಕಣ್ಮರೆಯಾಗುವ ಕಾಲ ದೂರವೇನಿಲ್ಲ.

ಈ ವಿಷಮ ಪರಿಸ್ಥಿತಿಯಲ್ಲಿ ಕೇಂದ್ರ ಸರ್ಕಾರ ರೂಪಿಸಿ ಜಾರಿಗೆ ತಂದಿರುವ ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣ ಮತ್ತು ಪ್ರಕಟನೆಗಳ ಯೋಜನೆ ಎಷ್ಟು ಮಹತ್ವದ್ದು ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕಾಗಿ ಸಂಸ್ಕೃತಿಪ್ರೇಮಿಗಳೆಲ್ಲರೂ ಕೇಂದ್ರ ಸರ್ಕಾರವನ್ನು ಅಭಿನಂದಿಸಬೇಕು.

ಈ ಮೂರು ನಾಲ್ಕು ವರ್ಷಗಳಿಂದಲೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಈ ಯೋಜನೆಯನ್ನು ಸದುಪಯೋಗಪಡಿಸಿಕೊಳ್ಳುತ್ತಿದೆ. ಈ ಸಂದರ್ಭದಲ್ಲಿ ಸಂಗ್ರಹಣ ಕಾರ್ಯದ ಬಗೆಗೆ ವಿಷಾದದಿಂದ ಒಂದು ಮಾತು ಹೇಳಬೇಕಾಗಿದೆ.

ಬಿ.ಎಂ.ಶ್ರೀ. ಯವರು 1911 ರಷ್ಟು ಹಿಂದೆಯೇ "ಕನ್ನಡ ಮಾತು ತಲೆಯೆತ್ತುವ ಬಗೆ" ಎಂಬ ತಮ್ಮ ಐತಿಹಾಸಿಕ ಮಹತ್ವವುಳ್ಳ ಧಾರವಾಡದ ಭಾಷಣದಲ್ಲಿ–

"ದೇಶದಲ್ಲಿ ಹುಳುತಿಂದುಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲಾ ಶೇಖರಿಸಿ ಒಂದನ್ನೂ ಬಿಡದಂತೆ ಅಚ್ಚುಹಾಕುವುದು. ಈ ಕೆಲಸವನ್ನು ಮೈಸೂರು ಸರ್ಕಾರ ದವರೂ, ಕಾವ್ಯಮಂಜರಿ, ಕಾವ್ಯಕಲಾನಿಧಿಗಳಸಂಪಾದಕರೂ ಆಗಲೇ ಮಾಡುತ್ತಲೇ ಇದ್ದಾರೆ. ಇವರಿಗೆ ಎಲ್ಲರೂ ಕೃತಜ್ಞರು" ಎಂದು ಹೇಳಿದ್ದಾರೆ.

ಈಗ ಕಾವ್ಯಮಂಜರಿ, ಕಾವ್ಯಕಲಾನಿಧಿಗಳು ಇಲ್ಲ. ಆ ಗ್ರಂಥಮಾಲೆಗಳ ಪ್ರಾಣಸ್ವರೂಪರಾಗಿದ್ದ ದಿ॥ ಮಂ.ಅ. ರಾಮಾನುಜ ಅಯ್ಯಂಗಾರ್ ಮತ್ತು ದಿ॥ ಎಸ್. ಜಿ. ನರಸಿಂಹಾಚಾರ್ ಪ್ರಾತಃಸ್ಮರಣೀಯರು. ಮೈಸೂರು ಸರ್ಕಾರದ ಪರವಾಗಿ ಅಂದು ಹಸ್ತಪ್ರತಿಗಳ ಸಂಗ್ರಹಣೆಗೆ ದೇಶವನ್ನೆಲ್ಲ ಸುತ್ತಿ ಅವನ್ನು ಶೇಖರಿಸಿ,

ಪಂಪಭಾರತ, ಪಂಪರಾಮಾಯಣ ಶಬ್ದಮಣಿದರ್ಪಣ, ಛಂದೋಂಬುಧಿಗಳಂತಹ ಉದ್ಗ್ರಂಥಗಳನ್ನು ಮುದ್ರಣಕ್ಕೆ ಅಣಿಮಾಡಿದವರು ಬಿ. ಲ್ಯೂಯಿ ರೈಸ್ ಅವರು, ಅವರ ತರುವಾಯ ಆರ್. ನರಸಿಂಹಾಚಾರ್ಯರು–ಆರ್ಕಿಯಾಲಜಿ ಇಲಾಖೆಯ ಮೂಲಕ. ಈ ಕಾರ್ಯಕ್ಕೆ ಸ್ಪಷ್ಟ ಸ್ವರೂಪ ಬಂದದ್ದು ಮೈಸೂರು ಓರಿಯಂಟಲ್ ಲೈಬ್ರರಿ ಸ್ಥಾಪನೆ ಆದಾಗ. ಈ ಸಂಸ್ಥೆಯಲ್ಲಿ ಕೆಲಸಮಾಡಿದ ದಿ॥ ಡಾ॥ ಎನ್. ಅನಂತರಂಗಾಚಾರ್ ಮತ್ತು ದಿ॥ ಎಚ್. ದೇವೀರಪ್ಪನವರು ಈ ಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆ ನೆನೆಯ ತಕ್ಕದ್ದು. ಓರಿಯಂಟಲ್ ಲೈಬ್ರರಿ, ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಆಗಿ ಪರಿವರ್ತನೆಗೊಂಡು ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಸ್ಥಾಪನೆ ಆದಾಗ ಮಾತೃಸಂಸ್ಥೆಯ ಕನ್ನಡ ಹಸ್ತಪ್ರತಿಗಳ ಸಂಗ್ರಹವೆಲ್ಲವೂ ಅಧ್ಯಯನ ಸಂಸ್ಥೆಯ ಸಂಶೋಧನ ವಿಭಾಗಕ್ಕೆ ವರ್ಗಾವಣೆ ಆಯಿತು. ಈ ವಿಭಾಗ ಹಿಂದಿನ ವಿದ್ವಾಂಸರ ಕಾರ್ಯವನ್ನು ಶ್ಲಾಘ್ಯವಾದ ರೀತಿಯಲ್ಲಿ ಮುಂದುವರಿಸಿಕೊಂಡು ಬರುತ್ತಿದೆ. ದೇವೀರಪ್ಪನವರು ರಿಸರ್ಚ್ ಇನ್‌ಸ್ಟಿಟ್ಯೂಟ್‌ನ ನಿರ್ದೇಶಕರಾಗಿದ್ದ ಕಾಲದಲ್ಲೇ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಗ್ರಂಥಸೂಚಿಯನ್ನು ನಾಲ್ಕು ಸಂಪುಟಗಳಲ್ಲಿ ಹೊರತಂದು ಮಹೋಪಕಾರ ಮಾಡಿರುತ್ತಾರೆ. ಈ ಘನವಾದ ಕಾರ್ಯದಲ್ಲಿ ಜ್ಞಾತಾಜ್ಞಾತವಾಗಿ ದುಡಿದವರೆಲ್ಲರೂ ಕೃತಜ್ಞತೆಗೆ ಪಾತ್ರರು.

ಪ್ರತಿಷ್ಠಾನ ಈಗ ಹೊರತರುತ್ತಿರುವ ಈ ಗ್ರಂಥಸೂಚಿಗೂ ಮೇಲ್ಕಂಡ ಸಂಪುಟಗಳು ಮಾದರಿಯಾಗಿವೆ, ಮಾರ್ಗದರ್ಶಕವಾಗಿವೆ. ನಮ್ಮ ನಾಡಿನಲ್ಲಿ ಹಸ್ತಪ್ರತಿಗಳ ಶೇಖರಣೆ ಉಳ್ಳ ಪ್ರತಿಯೊಂದು ಸಂಸ್ಥೆಯೂ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ತಯಾರಿಸಿ ಪ್ರಕಟಿಸಬೇಕಾದದ್ದು ಅತ್ಯಗತ್ಯ. ಅಪ್ರಕಟಿತವಾದ ಹಸ್ತಪ್ರತಿಗಳು ಯಾವುವು ಎಲ್ಲಿ ಇವೆ ಎಂದು ತಿಳಿದು ಅವುಗಳಲ್ಲಿ ಮಹತ್ವದ ಗ್ರಂಥಗಳನ್ನು ಆದ್ಯತೆಯ ಆಧಾರದ ಮೇಲೆ ಮುದ್ರಿಸುವುದಕ್ಕೂ, ಗ್ರಂಥಸಂಪಾದನೆ ಮಾಡುವವರು ಒಂದು ಗ್ರಂಥದ ಬೇರೆ ಬೇರೆ ಪ್ರತಿಗಳು ದೊರಕುವ ಹಾಗಿದ್ದಲ್ಲಿ ಪಾಠಾಂತರ ಸಂಕಲನ ಕಾರ್ಯಕ್ಕೆ ಅವುಗಳನ್ನು ಉಪಯೋಗಿಸಿಕೊಂಡು ಕವಿಪಾಠವನ್ನು ಶಾಸ್ತ್ರೀಯವಾಗಿ ನಿರ್ಧರಿಸುವುದಕ್ಕೂ, ಈಗಾಗಲೇ ಮುದ್ರಿತವಾಗಿರುವ ಗ್ರಂಥಗಳನ್ನು ಹೊಸದಾಗಿ ಬೆಳಕಿಗೆ ಬಂದಿರಬಹುದಾದ ಹಸ್ತಪ್ರತಿಗಳ ಸಹಾಯದಿಂದ ಪರಿಷ್ಕರಣಮಾಡಿ ಪುನರ್ಮುದ್ರಣ ಮಾಡಿಸುವುದಕ್ಕೂ ಹಸ್ತಪ್ರತಿ ಸೂಚಿಗಳು ನೀಡುವ ವಿವರಪೂರ್ಣ ಮಾಹಿತಿ ಅಗತ್ಯವಾದ ತಿಳಿವಳಿಕೆ ನೀಡುತ್ತವೆ. ಎಷ್ಟೇ ಶಾಸ್ತ್ರೀಯ ವಿಧಾನಗಳಿಂದ ಹಸ್ತಪ್ರತಿಗಳನ್ನು ಜೋಪಾನ ಮಾಡಿದರೂ ಅವುಗಳ ಆಯುಷ್ಯಕ್ಕೆ ಒಂದು ಮಿತಿಯುಂಟೇ ಉಂಟು. (ಕಾಗದಕ್ಕಿಂತ ಓಲೆಗರಿ ದೀರ್ಘಾಯುಷಿ ಎಂಬ ಅಭಿಪ್ರಾಯವೂ ಇದೆ. ಆದರೆ ಅದರ ಪ್ರಸಾರಕ್ಕೆ ಮುದ್ರಣ ಕಾರ್ಯ ಅಗತ್ಯ.) ಹೀಗಿರುವುದರಿಂದ,

ಹಸ್ತಪ್ರತಿಗಳ ಮುದ್ರಣ ಮರುಮುದ್ರಣಗಳು ಪರೋಕ್ಷವಾಗಿ ಅವುಗಳ ಸಂರಕ್ಷಣಕಾರ್ಯವೇ ಆಗುತ್ತದೆ.

ಮುದ್ರಣವಾಗುವವರೆಗೂ ಆಮೇಲೂ ಹಸ್ತಪ್ರತಿಗಳ ಸಂರಕ್ಷಣೆ ಅವುಗಳ ಮಾಲಿಕರ ಮೇಲೆ ಬಿದ್ದ ದೊಡ್ಡ ಹೊಣೆಗಾರಿಕೆ. ಸಂಸ್ಥೆಗಳು, ಮಠಗಳು, ಈ ದಿಸೆಯಲ್ಲಿ ತುರ್ತು ಗಮನ ಹರಿಸಿ ಅವುಗಳ ಸಂರಕ್ಷಣೆಗೂ ವರ್ಣನಾತ್ಮಕ ಸೂಚಿ ನಿರ್ಮಾಣಕ್ಕೂ ವ್ಯವಸ್ಥೆ ಮಾಡಬೇಕು. "ದಾನಾತ್ ಶ್ರೇಯಃ ಅನುಪಾಲನಂ" ಎಂಬುದೊಂದು ಪ್ರಾಚೀನ ಸೂಕ್ತಿ. ಇದು ಹಸ್ತಪ್ರತಿಗಳಿಗೆಂದೇ ಹೇಳಿದ ಮಾತು ಎನ್ನುವಷ್ಟು ಅಕ್ಷರಶಃ ಯಥಾರ್ಥವಾದದ್ದು. ದಾನಕ್ಕಿಂತ ಅನುಪಾಲನ ಶ್ರೇಯಸ್ಕರ ಎಂದದ್ದರಿಂದ ದಾನಮಾಡಬಾರದು ಎಂದೇನಿಲ್ಲ. ಸಂರಕ್ಷಣಕಾರ್ಯ ಮಾಡಲಾಗದಂಥ ಸಂಸ್ಥೆಗಳೂ ಮಠಗಳೂ ಖಾಸಗಿ ಜನರೂ ದಾನಮಾಡುವುದೇ ಶ್ರೇಯಸ್ಕರ. (ಸಾಂಕೇತಿಕ ಮೌಲ್ಯವನ್ನು ಪಡೆದು ಬೆಲೆಗೆ ಕೊಟ್ಟರೂ ದೋಷವಿಲ್ಲ) ದಾನ ಮಾಡುವಾಗ ಅಪಾತ್ರರಿಗೂ ಮೂರ್ಖರಿಗೂ ಸರಿಯಾಗಿ ಉಪಯೋಗ ಮಾಡಿಕೊಳ್ಳ ಲಾಗದವರಿಗೂ ದಳ್ಳಾಳಿಗಳಿಗೂ ದಾನಮಾಡುವುದಾಗಲಿ ಮಾರುವುದಾಗಲಿ ಖಂಡಿತ ಕೂಡದು. ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಪ್ರಕಟನೆಗಳನ್ನು ತನ್ನ ಮುಖ್ಯ ಕಾರ್ಯ ಚಟುವಟಿಕೆಗಳಲ್ಲಿ ಒಂದನ್ನಾಗಿ ಹೊಂದಿರುವ ಪ್ರತಿಷ್ಠಾನದಂತಹ ಸರ್ಕಾರದಲ್ಲಿ ನೊಂದಾವಣೆ (ರಿಜಿಸ್ಟರ್) ಆಗಿರುವ ಸಂಸ್ಥೆಗಳು, ಕೆಲವು ವಿಶ್ವವಿದ್ಯಾಲಯಗಳ ಹಸ್ತಪ್ರತಿ ವಿಭಾಗಗಳು, ಇವುಗಳಿಗೆ ಹಸ್ತಪ್ರತಿಗಳನ್ನು ದಾನವಾಗಿ ಮಾಡಿದರೆ ದಾನ ಸಾರ್ಥಕವಾಗುವುದು. ಹಸ್ತಪ್ರತಿಗಳನ್ನು ಉಳ್ಳವರು ಪ್ರತಿಷ್ಠಾನದ ಹಸ್ತಪ್ರತಿ ಭಂಡಾರಕ್ಕೆ ದಯವಿಟ್ಟು ಅವುಗಳನ್ನು ದಾನಮಾಡಿ ಸರಸ್ವತೀ ದೇವಿಯ ಕೃಪೆಗೆ ಪಾತ್ರರಾಗಿ ಎಂದು ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

ಪ್ರತಿಷ್ಠಾನದ ಹಸ್ತಪ್ರತಿಸಂಗ್ರಹದ ಸುಮಾರು ಒಂದು ನೂರು ಕೃತಿಗಳ ವಿವರಗಳನ್ನು ಈ ನಮ್ಮ ಪ್ರಥಮ ಸೂಚಿಯಲ್ಲಿ ಅಳವಡಿಸಲಾಗಿದೆ. ಇದರ ಸ್ವರೂಪದ ಬಗೆಗೆ ಸಂಪಾದಕದ್ವಯರು ಅಗತ್ಯ ವಿವರಣೆಗಳನ್ನು ಒದಗಿಸಿರುವುದರಿಂದ ಆ ಬಗೆಗೆ ನಾನು ಹೇಳುವುದು ಏನೂ ಉಳಿದಿಲ್ಲ. ಕನ್ಯಾಪಿತೃ ತನ್ನ ಮಗಳನ್ನು ಒಳ್ಳೆಯ ವರನಿಗೆ ಕೊಟ್ಟರೆ ಯಾವ ಸಂತೃಪ್ತಿಯುಂಟಾಗುವುದೋ ಆ ಸಂತೃಪ್ತಿ ನನಗೆ ಉಂಟಾಗಿದೆ– ನಮ್ಮ ಪೂರ್ವಜರ ಹಸ್ತಪ್ರತಿಗಳನ್ನು ಪ್ರತಿಷ್ಠಾನಕ್ಕೆ ನೀಡಿ. ಇತರರೂ ಈ ರೀತಿ ಮುಂದೆ ಬಂದು ದಾನಮಾಡಲಿ ಎನ್ನುವುದೇ ನನ್ನ ಸವಿನಯದ ಅರಿಕೆ. ಅನೇಕರು ಈಗಾಗಲೇ ಆ ರೀತಿ ಮಾಡಿದ್ದಾರೆ ; ಅವರಿಗೆ ಸಂಸ್ಥೆ ಋಣಿಯಾಗಿದೆ.

ತಜ್ಞರು ಈ ಸೂಚಿಯಲ್ಲಿಯ ಲೋಪದೋಷಗಳನ್ನು ತೋರಿಸಿಕೊಟ್ಟರೆ, ಸಿದ್ಧವಾಗುತ್ತಿರುವ ಎರಡನೆಯ ಸಂಪುಟದ ಪ್ರಕಟನೆಗೆ ಸಹಾಯವಾಗುವುದು. ಎರಡನೆಯ ಸಂಪುಟದಲ್ಲಿ ಸಂಸ್ಕೃತ ಮುಂತಾದ ಇತರ ಭಾಷೆಗಳ ತಾಡವೋಲೆ ಹಸ್ತಪ್ರತಿಗಳ ಹಾಗೂ ಕಾಗದದ ಹಸ್ತಪ್ರತಿಗಳ ವಿವರಗಳನ್ನೂ ಸೇರಿಸುವ ಉದ್ದೇಶವಿದೆ.

ಕೊನೆಯದಾಗಿ, ಈ ಹಸ್ತಪ್ರತಿಗಳ ಸೂಚಿಯನ್ನು ಅತ್ಯಂತ ತಾಳ್ಮೆಯಿಂದ ಶ್ರಮವಹಿಸಿ ಸಿದ್ಧಪಡಿಸಿದ ನನ್ನ ಮಾನ್ಯ ಮಿತ್ರರಾದ ಶ್ರೀ ಕೆಳದಿ ಗುಂಡಾ ಜೋಯಿಸ್, ಅವರಿಗೂ ಪ್ರತಿಷ್ಠಾನದ ನಿಷ್ಠಾವಂತ ಕಾರ್ಯಕರ್ತರಾದ ಶ್ರೀ ನಾ. ಗೀತಾಚಾರ್ಯರಿಗೂ ನನ್ನ ಶುಭಾಶಯಪೂರ್ವಕವಾದ ನೆನಕೆಗಳು ಸಲ್ಲುತ್ತವೆ.

ಎಂ. ವಿ. ಸೀತಾರಾಮಯ್ಯ

ಅಧ್ಯಕ್ಷ.

೧೬-೧೨-೧೯೮೭

# ಸಂಪಾದಕರ ಅರಿಕೆ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದಲ್ಲಿರುವ ತಾಡವೋಲೆ ಹಸ್ತಪ್ರತಿಗಳ ಪೈಕಿ ತೊಂಬತ್ತಾರು ಹಸ್ತಪ್ರತಿಗಳ ವರ್ಣನಾತ್ಮಕ ವಿವರಗಳನ್ನು ಈ ಪ್ರಥಮ ಸಂಪುಟದ ಮೂಲಕ ನಾಡಿನ ವಿದ್ವಜ್ಜನರ ಮುಂದಿಡುತ್ತಿದ್ದೇವೆ. ಪ್ರತಿಷ್ಠಾನದ ಭಂಡಾರದಲ್ಲಿರುವ ಕನ್ನಡ ಹಸ್ತಪ್ರತಿಗಳ ವಿಷಯವನ್ನು ಮಾತ್ರ ಈ ಸಂಪುಟದಲ್ಲಿ ಅಡಕ ಗೊಳಿಸಲಾಗಿದೆ. ಇನ್ನು ಒಂದು ಸಂಪುಟಕ್ಕಾಗುವಷ್ಟು ಕನ್ನಡ ಹಸ್ತಪ್ರತಿಗಳು ಇವೆ : ಇವುಗಳಲ್ಲಿ ಹಲಕೆಲವು ಕಾಗದದ ಹಸ್ತಪ್ರತಿಗಳು. ಜೊತೆಗೆ, ಸಂಸ್ಕೃತ ಭಾಷೆಯ ಹಾಗೂ ತಮಿಳು, ತೆಲುಗು, ತಿಗಳಾರಿ ಲಿಪಿಗಳ ಗ್ರಂಥಗಳೂ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದಲ್ಲಿ ಇವೆ.

ಈ ಸಂಪುಟದಲ್ಲಿ ಕನ್ನಡ ಗ್ರಂಥಗಳ ಮಾಹಿತಿಯನ್ನು ಅಳವಡಿಸಲಾಗಿದೆ. ಕನ್ನಡ ಲಿಪಿಯಲ್ಲಿರುವ ಸಂಸ್ಕೃತ ಹಸ್ತಪ್ರತಿಗಳ ಪ್ರವೇಶಿಕೆಗಳನ್ನೂ (Entries) ಈ ಸಂಪುಟದಲ್ಲಿ ಕಾಣಬಹುದು.

ಒಟ್ಟು 15 ವಿವರಾಂಶಗಳಲ್ಲಿ ಹಸ್ತಪ್ರತಿಗಳ ವರ್ಣನೆಯನ್ನು ನೀಡಲಾಗಿದೆ. ಅವುಗಳು ಈ ಕೆಳಕಂಡಂತಿವೆ :

1) ಇಂಗ್ಲಿಷ್ ಅಂಕಿ : ಹಸ್ತಪ್ರತಿಯ ಕ್ರಮಾಂಕ ; 2) ಕೃತಿಯ ಹೆಸರು ; 3) ಸಣ್ಣ ಅಕ್ಷರಗಳ ಮೂರು ಸಾಲುಗಳಲ್ಲಿ ಗ್ರಂಥ ಸ್ವರೂಪ ವಿವರಗಳನ್ನು ನೀಡಿದೆ ; ಕ್ರಮವಾಗಿ, ಮೊದಲನೆಯ ಸಾಲಿನಲ್ಲಿ, ಹಸ್ತಪ್ರತಿಯ ಸಂಖ್ಯೆ ; ಕವಿಯ ಹೆಸರು ; ಪ್ರತಿಪುಟದ ಪ್ರತಿಯೊಂದು ಸಾಲಿನಲ್ಲಿರುವ ಸರಾಸರಿ ಅಂದಾಜು ಅಕ್ಷರಸಂಖ್ಯೆ ; ಎರಡನೆಯ ಸಾಲಿನಲ್ಲಿ, ಹಸ್ತಪ್ರತಿಯ ಉದ್ದ ಮತ್ತು ಅಗಲದ ಅಳತೆ ; ಕವಿಯ ಕಾಲ ; ಪ್ರತಿಪುಟದಲ್ಲಿಯ ಸಾಲುಗಳ ಅಂದಾಜು ಸಂಖ್ಯೆ ; ಮತ್ತು ಮೂರನೆಯ ಸಾಲಿನಲ್ಲಿ, ಗ್ರಂಥದ (ಓಲೆಗರಿ ಕಟ್ಟಿನ) ಪತ್ರ(ಗರಿ)ಗಳ ಸಂಖ್ಯೆ ; ಕೃತಿಯ ರೂಪಾಂಶ (ಅಂದರೆ, ಗದ್ಯವೆ, ಪದ್ಯವೇ, ಪದ್ಯವಾದರೆ ಪದ್ಯದ ಛಂದಸ್ಸು) ; ಗ್ರಂಥದ ಭಾಷೆ ಈ ವಿವರ ಗಳನ್ನು ಕೊಡಲಾಗಿದೆ. ಅನಂತರ ಕೃತಿಯ ವಿಷಯ, ಆದರ ಆದಿ, ಅಂತ್ಯ ಮತ್ತು ವಿಶೇಷ ವಿವರಗಳಲ್ಲಿ ಗ್ರಂಥದ ಸ್ವರೂಪವನ್ನು ಸೂಚಿಸಿದೆ.

ಗ್ರಂಥದ ಸ್ವರೂಪ ವಿವರಗಳನ್ನು ನೀಡುವಾಗ ಕನ್ನಡ ಅಂಕಿಗಳನ್ನೇ ಬಳಸಿದೆ. ಪ್ರತಿಯ ಉದ್ದಗಲವನ್ನು ದಶಮಾನ ಪದ್ಧತಿಯ ಅಳತೆಯಲ್ಲಿ (ಸೆಂ.ಮೀ.) ಕೊಟ್ಟಿದೆ. ಮೊದಲನೆಯ ಅಂಕಿ ಉದ್ದದ ಅಳತೆ ; ಎರಡನೆಯದು ಅಗಲದ ಅಳತೆ.

ಕೆಲವು ಸಂಕೇತಾಕ್ಷರಗಳ ವಿವರಣೆ : ಓ–ಓಲೆಗರಿಯ ಪ್ರತಿ ; ಕಾ—ಕಾಗದದ ಪ್ರತಿ ; (ಕಾ. ದೊ—ಕಾಗದದ ಪ್ರತಿ ದೊಡ್ಡ ಪ್ರಮಾಣದ್ದು ; ಕಾ. ಚಿ.—ಕಾಗದದ ಪ್ರತಿ ಚಿಕ್ಕಪ್ರಮಾಣದ್ದು). ಈ ಸಂಕೇತಾಕ್ಷರಗಳ ಬಳಿಕ ಓರೆಗೆರೆಯೆಳೆದು ಹಸ್ತ ಪ್ರತಿಯ ಸಾಂಕೇತಾಂಕವನ್ನು ನೀಡಿದೆ. ಒಂದೇ ಓಲೆಗರಿ ಕಟ್ಟಿನಲ್ಲಿ ಅಥವಾ ಕಾಗದದ ಹಸ್ತಪ್ರತಿಯಲ್ಲಿ ಬೇರೆ ಬೇರೆ ಕೃತಿಗಳು ಇದ್ದರೆ ಆಕೃತಿ ಆ ಕಟ್ಟಿನಲ್ಲಿ ಎಷ್ಟನೆಯದು ಎಂಬುದನ್ನು ತಿಳಿಸುವುದಕ್ಕಾಗಿ ಪ್ರತಿಯ ಸಂಕೇತಾಂಕದ ಮುಂದೆ ಇನ್ನೊಂದು ಓರೆಗೆರೆ ಎಳೆದು ಆ ಗ್ರಂಥದ ಸಂಖ್ಯೆಯನ್ನು ಕೊಟ್ಟಿದೆ.

ಕವಿ ವಿಷಯಕ ವಿವರಗಳಿಗೆ ಕರ್ಣಾಟಕ ಕವಿಚರಿತೆ, ಮತ್ತು ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಹಾಗೂ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ ಚರಿತ್ರೆಗಳನ್ನು ಅವಲಂಬಿಸಿದೆ. ಕವಿಯ ಕಾಲಗಳು ತಿಳಿಯದಿದ್ದಾಗ ಆ ಸ್ಥಳಗಳಲ್ಲಿ ಪ್ರಶ್ನೆ ಚಿಹ್ನೆ (?) ಬಳಸಿದೆ.

ಕೆಲವು ಕಡೆ ಪತ್ರ ಸಂಖ್ಯೆಯ ಮುಂದೆ '+' ಚಿಹ್ನೆಯ ಮುಂದೆ ಕೆಲವು ಸಂಖ್ಯೆಗಳನ್ನು ಕೊಡಲಾಗಿದೆ ; ಅಂತಹ ಸಂದರ್ಭದಲ್ಲಿ + ಚಿಹ್ನೆಯನಂತರದ ಸಂಖ್ಯೆಯ ಪತ್ರಗಳು ಆ ಗ್ರಂಥಕ್ಕೆ ಸೇರದ, ಆದರೆ ಆ ಕಟ್ಟಿನಲ್ಲೇ ಇರುವ, ಪ್ರತ್ಯೇಕ ಗರಿಗಳು ಎಂದು ತಿಳಿಯಬೇಕು.

ವಿಷಯ ವಿಭಾಗದಲ್ಲಿ, ಕೃತಿಯ ವಸ್ತುವಿಷಯವನ್ನು ಒಂದೊಂದು ವಾಕ್ಯದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಅನಂತರ ಆದಿ, ಅಂತ್ಯ ವಿಭಾಗಗಳಲ್ಲಿ ಕೃತಿಯ ಆಯಾ ಭಾಗಗಳ ಬರಹವನ್ನು ಯಥಾಲಿಖಿತವಾಗಿ ಕೊಟ್ಟಿದೆ. ಇಲ್ಲಿ ಆ ಭಾಗವಿರುವ ಗರಿಗಳು ಆ ಕಟ್ಟಿನಲ್ಲಿ ಎಲ್ಲಿವೆ ಎಂದು ಸೂಚಿಸಲು ಅವು ಲಿಖಿತವಾಗಿರುವ ಪುಟ ಸಂಖ್ಯೆಯನ್ನು ನಿರ್ದೇಶಿಸಿದೆ. (ಪುಟಸಂಖ್ಯೆ ಎಂದರೆ ಆ ಗ್ರಂಥದ ಪತ್ರಸಂಖ್ಯೆ). ಪತ್ರಸಂಖ್ಯೆ ಇರುವ ಪತ್ರದ ಪಾರ್ಶ್ವವನ್ನು ಮುಂಭಾಗವೆಂದೂ ಪತ್ರಸಂಖ್ಯೆಯಿಲ್ಲದ ಪಾರ್ಶ್ವವನ್ನು ಹಿಂಭಾಗವೆಂದೂ ಸೂಚಿಸಿದೆ.

'ಆದಿ', 'ಅಂತ್ಯ'ಗಳ ಮುಂದೆ ಓಲೆಪುಟವನ್ನೂ ಅದರ ಮುಂದೆ ಸಾಲಿನ ಸಂಖ್ಯೆಯನ್ನು ಸೂಚಿಸಲಾಗಿದೆ. ಸಾಲಿನ ಸಂಖ್ಯೆಯನ್ನು ಸೂಚಿಸಿರುವ ಕಡೆ ಉದ್ಧೃತಭಾಗವು ಆ ಸಂಖ್ಯೆಯ ಸಾಲಿನಿಂದ ಪ್ರಾರಂಭವಾಗಿದೆಯೆಂದೂ, ಸಾಲಿನ ಸಂಖ್ಯೆಯನ್ನು ಸೂಚಿಸಿಲ್ಲದ ಕಡೆ ಪತ್ರದ ಮೊದಲನೆಯ ಸಾಲಿನಿಂದಲೇ ಆರಂಭವಾಗುತ್ತದೆಂದೂ ತಿಳಿಯತಕ್ಕದ್ದು. ಆದಿ ಮತ್ತು ಅಂತ್ಯ ವಿಭಾಗಗಳಲ್ಲಿ ಗ್ರಂಥದ ಸ್ವರೂಪ ತಿಳಿಯಲಾಗುವಂತೆ ಯಥಾವತ್ತಾಗಿ ಗ್ರಂಥಪಾಠವನ್ನು ಉದ್ಧರಿಸಲಾಗಿದೆ. ಈ ಉದ್ಧೃತಭಾಗಗಳಲ್ಲಿ ಇರುವ '× ×' ಚಿಹ್ನೆಗಳು ಗರಿ ತ್ರುಟಿತವಾಗಿರುವುದನ್ನು, '× ×....'ಈ ಚಿಹ್ನೆ ತ್ರುಟಿತವಾಗಿರುವ ಭಾಗ ಮುಂದುವರಿದಿರುವುದನ್ನು ಸೂಚಿಸುತ್ತದೆ. '........' ಈ ಚಿಹ್ನೆಯು ಗ್ರಂಥಪಾಠದ ಮುಂದುವರಿಕೆಯನ್ನು ಸೂಚಿಸುತ್ತದೆ. ಮತ್ತು ಕೆಲವು ಕಡೆ

'[ ]' ಈ 'ಚೌಕ' ಕಂಸವನ್ನು ಬಳಸಿದ್ದು ಈ ಕಂಸದೊಳಗೆ ಇರುವ ಪಾಠವನ್ನು ಆ ಭಾಗದ ಗರಿ ತ್ರುಟಿತವಾಗಿದ್ದು ಅಥವಾ ಅಸ್ಪಷ್ಟವಾಗಿದ್ದು ಸಂಪಾದಕರು ಊಹಿಸಿ ನಿರ್ಧರಿಸಿರುವ ಪಾಠವಾಗಿರುತ್ತದೆ.

ವಿಶೇಷ ವಿವರಣೆ ವಿಭಾಗದಲ್ಲಿ ಗ್ರಂಥಪಾಠಕ್ಕೆ ಮತ್ತು ಹಸ್ತಪ್ರತಿ ಸ್ವರೂಪಕ್ಕೆ ಸಂಬಂಧಪಟ್ಟಂತೆ ಲಿಪಿಯ ಸ್ವರೂಪ, ಪ್ರತಿಯ ಸ್ಥಿತಿಗತಿ, ಶಕಟರೇಫದ ಬಳಕೆ, ಪಾಠದ ಸಮಗ್ರತೆ, ಲುಪ್ತಗರಿಗಳ ವಿವರ, ಅದೇ ಕಟ್ಟಿನಲ್ಲಿರುವ ಇತರ ಗ್ರಂಥಗಳ ವಿವರ, ಲಿಪಿಕಾರರು, ಅಂಕಿತಗಳು, ಇತ್ಯಾದಿ ವಿಷಯಗಳನ್ನು ಕೊಟ್ಟಿದೆ. ಕೆಲವು ಕಟ್ಟುಗಳಲ್ಲಿರುವ ಕನ್ನಡ ಲಿಪಿಯ ಸಂಸ್ಕೃತ ಅಥವಾ ತೆಲುಗು ಭಾಷೆಗಳ ಗ್ರಂಥಗಳನ್ನು ಅನುಬಂಧದಲ್ಲಿ ಪ್ರತ್ಯೇಕ ಪಟ್ಟಿ ಮಾಡಲಾಗಿದೆ.

ಸೂಚಿಯಲ್ಲಿ ಕೊಟ್ಟಿರುವ ಗ್ರಂಥಭಾಗಗಳು ಪಾಠದೃಷ್ಟಿಯಿಂದ ಮೂಲ ಪ್ರತಿಯನ್ನೇ ಸಂಪೂರ್ಣವಾಗಿ ಹೋಲುತ್ತದೆ. ಗದ್ಯಭಾಗಗಳನ್ನು ಮೂಲದಲ್ಲಿರುವಂತೆಯೇ ಕೊಟ್ಟಿದೆ. ಪದ್ಯಭಾಗಗಳನ್ನು ಆಯಾ ಪದ್ಯಗಳ ಛಂದಸ್ಸಿಗೆ ಅನುಗುಣವಾಗಿ ಪದ್ಯಪಾದಗಳನ್ನು ಬಿಡಿಸಿ ಮುದ್ರಿಸಿದೆ. ಕೃತಿಯ ಉದ್ಧೃತ ಭಾಗಗಳಲ್ಲಿ ಪಾಠದ ಸ್ವರೂಪವನ್ನು ಇದ್ದುದಿದ್ದಂತೆ ಕಾಗಿಡುವ ಉದ್ದೇಶದಿಂದ ಲಿಪಿಲೇಖನ ಸ್ಖಾಲಿತ್ಯಗಳು, ಶಬ್ದರೂಪಗಳು, ವ್ಯಾಕರಣ ದೋಷಗಳು ಮುಂತಾದ ವೈಲಕ್ಷಣ್ಯಗಳನ್ನು ಯಥಾವತ್ತಾಗಿ ಉಳಿಸಿಕೊಳ್ಳಲಾಗಿದೆ.

ಉದ್ಧೃತ ಗ್ರಂಥಭಾಗದ ಆದಿ, ಅಂತ್ಯಗಳಲ್ಲಿ ಕವಿ ಅಥವಾ ಲಿಪಿಕಾರರು ಮಾಡಿರುವ ಇಷ್ಟದೇವತಾ ಸ್ತುತಿಗಳೂ ಶ್ರೀಕಾರಬರಹಗಳೂ ಅಧಿಕವಾಗಿದ್ದಲ್ಲಿ ಅಂತಹ ಕಡೆ ಸಂಗ್ರಹಗೊಳಿಸಿ ಆ ಬಿಟ್ಟಿರುವ ಭಾಗದ ಪಾಠವನ್ನು ಸೂಚಿಸಲು '......' ಈ ಚಿಹ್ನೆಯನ್ನು ಬಳಸಿದೆ. ಕೆಲವೆಡೆ ಶ್ರೀಕಾರಗಳ ಸಂಖ್ಯೆಯನ್ನು ದುಂಡುಕಂಸದಲ್ಲಿ ಕೊಟ್ಟಿದೆ.

ಈ ಸೂಚಿಯಲ್ಲಿರುವ ಬಹು ಸಂಖ್ಯೆಯ ಹಸ್ತಪ್ರತಿಗಳು ಲಿಪಿಕಾರರಿಂದ ಪ್ರತಿ ಮಾಡಲ್ಪಟ್ಟವುಗಳು. ಆದರೆ ತಿಮ್ಮಪ್ಪದಾಸರ ಕೀರ್ತನೆಗಳು, ಹಾಗೂ ಅವರ ಇತರ ಕೃತಿಗಳು ಮತ್ತು ನಾರಾಯಣದಾಸರ ಕೀರ್ತನೆಗಳ ಪ್ರತಿಗಳು ಸ್ವಹಸ್ತಾಕ್ಷರ ಪ್ರತಿಗಳಾಗಿರುವಂತೆ ತೋರುತ್ತವೆ.

ಈ ಗ್ರಂಥವನ್ನು ಸಿದ್ಧಗೊಳಿಸಲು ನಮಗೆ ಅವಕಾಶ ಮಾಡಿಕೊಟ್ಟ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಮತ್ತು ಮುಖ್ಯವಾಗಿ ನಮಗೆ ಒತ್ತಾಸೆ ನೀಡಿ ನಮ್ಮಿಂದ ಈ ಕೆಲಸವನ್ನು ಮಾಡಿಸಿದ ಸಂಸ್ಥೆಯ ಅಧ್ಯಕ್ಷರಾಗಿರುವ ಪ್ರೊ|| ಎಂ. ವಿ. ಸೀತಾರಾಮಯ್ಯನವರಿಗೂ ನಾವು ಕೃತಜ್ಞರು. ಇನ್ನೊಂದು ಕಾರಣಕ್ಕೂ ಅವರಿಗೆ ಕೃತಜ್ಞತೆ ಸಲ್ಲಬೇಕು. ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದ ಬಹುಸಂಖ್ಯೆಯ ಪ್ರತಿಗಳ ಮೂಲ ದಾನಿಗಳು ಪ್ರೊ|| ಎಂ.ವಿ.ಸೀ. ಅವರು ಮತ್ತು ಅವರ ಸೋದರ ಬಂಧುಗಳು. ಈ ಸಂಪುಟದಲ್ಲಿ ಉಲ್ಲೇಖಿತವಾಗಿರುವ ಬಹು ಸಂಖ್ಯೆಯ ಹಸ್ತಪ್ರತಿಗಳು ಅವರಿಂದ ದಾನವಾಗಿ

ಬಂದವುಗಳೇ. ಆ ಮೂಲ ಸಂಗ್ರಹ ಇಂದು ತಕ್ಕಮಟ್ಟಿಗೆ ಬೆಳೆದು, ಗಣ್ಯವಾದ ಹಸ್ತಪ್ರತಿಭಂಡಾರವಾಗಿ ಪರಿಣಮಿಸಿದೆ. ದಾನವಾಗಿ ಹಸ್ತಪ್ರತಿಗಳನ್ನು ನೀಡಿದ ಎಲ್ಲರೂ ಪ್ರತಿಷ್ಠಾನದ ಕೃತಜ್ಞತೆಗೆ ಪಾತ್ರರು.

ಈ ಗ್ರಂಥಸೂಚಿಯನ್ನು ಸಿದ್ಧಪಡಿಸುವಲ್ಲಿ ಹಲವರು ಮಹನೀಯರು ನೆರವಾಗಿದ್ದಾರೆ. ಅವರೆಲ್ಲರಿಗೂ ನಾವು ಕೃತಜ್ಞರು. ಈ ಸೂಚಿಯ ಕರಡು ತಿದ್ದುವಲ್ಲಿ ಸಹಕರಿಸಿದ ಗೆಳೆಯ ಶ್ರೀ ಪರಮಶಿವಮೂರ್ತಿ ಅವರಿಗೂ ನಾವು ಕೊಟ್ಟ ತೊಂದರೆಯನ್ನೆಲ್ಲ ಸಂತೋಷದಿಂದ ಸಹಿಸಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ನೇತ್ರಾ ಪ್ರಿಂಟರ್ಸ್‌ನ ಮಾಲಿಕರಾದ ಶ್ರೀ ಮುನಿಧರ್ಮಯ್ಯ ಅವರಿಗೂ ಅವರ ಸಿಬ್ಬಂದಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಎಷ್ಟೇ ಎಚ್ಚರದಿಂದ ತಪ್ಪುಗಳನ್ನು ತಿದ್ದಿದರೂ ಅಲ್ಲಲ್ಲಿ ಅಚ್ಚಿನ ದೋಷಗಳು ಉಳಿದುಕೊಂಡಿವೆ. ಮತ್ತು ನಮ್ಮ ಪರಿಮಿತವಾದ ಅನುಭವದ ಕಾರಣದಿಂದಲೂ ಕೆಲವು ದೋಷಗಳು ಉಳಿದಿರಬಹುದು. ವಾಚಕರೂ, ವಿದ್ವಜ್ಜನರೂ ದಯಮಾಡಿ ಈ ತಪ್ಪುಗಳನ್ನು ಮನ್ನಿಸಿ, ಈ ಉಪಯುಕ್ತ ಪ್ರಕಟನೆಯನ್ನು ಉದಾರಚಿತ್ತರಾಗಿ ಸ್ವೀಕರಿಸಬೇಕಾಗಿ ನಮ್ರತೆಯಿಂದ ವಿನಂತಿಸಿಕೊಳ್ಳುತ್ತೇವೆ.

ಈ ಸನ್ನಿವೇಶದಲ್ಲಿ, ಅಜ್ಞಾತಲಿಪಿಕಾರನೊಬ್ಬನ ಬಿನ್ನಹವೇ ನಮ್ಮದೂ ಆಗಿದೆ :

ತಪ್ಪಂ ಬರೆದಂ ಕಡುಜಡ
ನಪ್ಪಂ ಬರೆದಾತನೆಂದು ಬಯ್ಯಲುವೇಡ
ತಪ್ಪುಕ್ಕು ಶುದ್ಧಮಕ್ಕು
ತಪ್ಪುಳ್ಳರೆ ತಿದ್ದಿಕೊಳ್ವುದುತ್ತಮ ಪುರುಷರ್ ॥

ಬೆಂಗಳೂರು
1-12-87

ಕೆಳದಿ ಗುಂಡಾ ಜೋಯಿಸ್
ನಾ. ಗೀತಾಚಾರ್ಯ

## ಅನುಭವಾಮೃತ

| | | |
|---|---|---|
| ನಂ : ಓ/೧ | ಮಹಲಿಂಗರಂಗ | ೫೯ ಅಕ್ಷರ |
| ೩೬-೬ × ೩-೫ ಸೆಂ.ಮೀ | ಕ್ರಿ.ಶ. ಸು. ೧೬೭೫ | ೫ ಸಾಲು |
| ೯೭ ಪತ್ರ | ಷಟ್ಪದಿ | ಕನ್ನಡ |

**ವಿಷಯ :** ತತ್ತ್ವಬೋಧೆ.

**ಆದಿ :** ಓಲೆಪುಟ ೩

ಶ್ರುತಿ ಗುರುಗಳುಪದೇಶದಿಂದಲಿ
ಮಥಿಸಿ ತನ್ನೊಳು ತಾನೆ ತಿಳಿದದ
ಸತತ ಮನನಾಭ್ಯಾಸದಿಂ ದೃಢತರವ ಮಾಡೇ
ಅತಿಶಯ ಗ್ನಾನಾಪರೋಕ್ಷ
ಸ್ಥಿತಿಯೆನಿಸುವನು ಭವವದಾಗಲು
ಗತಿಯ ಪಡುವರು ಯೋಗ ಸಹಜಾನಂದ ಫಲವದಕೇ ॥೧೫॥

ಅನುಭವಾಂಮ್ರುತದಲ್ಲಿ ಪೇಳುವೆ
ನಿನಗೆ ಮೊದಲಧಿಕಾರ ಲಕ್ಷಣ
ವನು ಯಿಹಮುಕ್ತಾರ್ಥ ಫಲಭೋಗದ ವಿರಾಗವನೂ
ತನಯ ತ್ವಂಪದ ತತ್ಪದದ ಶೋ
ಧನೆಯ ಲಕ್ಷ್ಯವನಸಿಪದದೊಳೊಂ
ದೆನಿಸುವೈಕ್ಯವ ಭೂಮಿಕೆಗಳಭ್ಯಾಸದಿರವುಗಳ ॥೧೬॥

**ಅಂತ್ಯ :** ಓಲೆಪುಟ ೧೦೯ (ಹಿಂಭಾಗ)

ಸರ್ವಲೋಕಾಧ್ಯಕ್ಷ ಜಯ ಜಯ
ಸರ್ವಲೋಕಾಧಾರ ಜಯ ಜಯ
ಸರ್ವಮಂಗಳೆಯರಸ ಜಯ ಜಯ ಸರ್ವೇಶಾ
ಗರ್ವಿತಾಸುರಮಥನ ಜಯ ಜಯ
ದುರ್ವಿದಗ್ಧದುರಾಪ ಜಯ ಜಯ
ಪರ್ವತಾಧಿಪ ಮಲ್ಲಿಕಾರ್ಜುನದೇವ ಜಯ ಜಯತೊ ॥೩೯॥

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ× × × × ಭೃಂಗಾಯ ಮಾನ ಸಹವಾಸಿ ಮಹಲಿಂಗರಂಗ ವಿರಚಿತಮಪ್ಪ ಅನುಭವಾಂಮ್ರುತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನೆ ಮಲ್ಲಿಕಾರ್ಜುನ× × × ×ಶ್ರೀ ಕೃಷ್ಣಾರ್ಪಣಮಸ್ತು॥ ಅಂತ್ತು ಅಧ್ಯಾಯ ೧೧ ಕಂ ಪದನೂ ೮೦೨ ಕಂ ಮಂಗಳಶ್ರೀ ಶ್ರೀ....

**ವಿ.ವಿ :** ಅಸಮಗ್ರ, ಸುಲಭ ಗ್ರಾಹ್ಯ, ಬರವಣಿಗೆ ಸ್ಪಷ್ಟವಾಗಿದೆ. ಅನೇಕ ಗರಿಗಳಿಗೆ ಮಸಿಲೇಪನವಿಲ್ಲ. ೧,೧೧,೨೧,೪೯,೧೧೦ನೇ ಗರಿಗಳು ತ್ರುಟಿತವಾಗಿವೆ. ೧೦,೧೬, ೧೭,೨೨,೩೪,೩೬,೪೯,೫೦ನೇ ಗರಿಗಳು ಕಾಣಸಿಗುವುದಿಲ್ಲ. ೯ನೇ ಗರಿಯಲ್ಲಿ ಪುಟ ಸಂಖ್ಯೆ ಇಲ್ಲ. ಹಿಂಭಾಗದಲ್ಲಿ ಅರ್ಧಭಾಗ ಮಾತ್ರ ಬರವಣಿಗೆಯಿದ್ದು ಈ ಬರವಣಿಗೆಯಲ್ಲಿ ವ್ಯತ್ಯಾಸವಿದೆ.

೧ನೇ ಪುಟದ ಓಲೆಯಲ್ಲಿ ರಂಧ್ರದ ಸುತ್ತ ಮತ್ತು ಬಹುಮಟ್ಟಿಗೆ ರಂಧ್ರದ ವರೆಗೂ ಗರಿ ಮುರಿದಿದೆ. "ಶ್ರೀ ಮಹಾ ಶಾರದಾ ಗುರುಭ್ಯೋ ನಮಃ॥ ॥ಶುಭಮಸ್ತು॥ ॥ಶೋಭನಮಸ್ತು ವಿಭವನಾಮ ಸಂವತ್ಸರದ ಮಾ× × ನಿರ್ವಿಘ್ನಮಸ್ತು॥ (ಶುಕ್ಲಾಂ ಭರದರಂ....ಶ್ಲೋಕವಿದೆ) ಅಭಿಪ್ಸಿತಾರ್ಥಸಿದ್ಧ್ಯರ್ಥಂ× × ×ಮಾಯ ನಮಹ ಆಂಜನೇಯ ಸ್ವಾಮಿ ಪಾದವೇ ಗತಿ। ಕ್ಷೇತ್ರಪಾಲಸ್ವಾಮಿ ಪಾದವೇ ಗತಿ। ಬಸವ ಶಂಕರಪಾದಾರವಿಂದವೇ ಗತಿ। × × ×ಸಂತೋಷದಿಂದಲಿ ತತ್ವಬೋಧೆಯ ಲೇಸೇನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ ॥ಪದನೂ॥" ಎಂಬ ಉಲ್ಲೇಖ ವಿದೆ. ಹಸ್ತಪ್ರತಿ ಸಂಖ್ಯೆ ೧೭ ಮತ್ತು ೨೧ರಲ್ಲಿಯೂ ಅನುಭವಾಮೃತ ಗ್ರಂಥಗಳಿವೆ.

## 2

## ಅನುಭವಾಮೃತ

| | | |
|---|---|---|
| ನಂ : ಓ/೧೭ | ಮಹಲಿಂಗರಂಗ | ೭೫ ಅಕ್ಷರ |
| ೩೫–೭ × ೩–೨ ಸೆಂ.ಮಿಾ | ಸು. ಕ್ರಿ.ಶ. ೧೬೭೫ | ೬ ಸಾಲು |
| ೭೫ ಪತ್ರ | ಷಟ್ಪದಿ | ಕನ್ನಡ |

**ವಿಷಯ :** ತತ್ತ್ವಬೋಧೆ

**ಆದಿ :** ಓಲೆಪುಟ (ತ್ರುಟಿತ)

ಕಾಯ ಸುಖವನು ಬಯಸಿ ಧನವನು
ಸಾಯಸದಲಾರ್ಜಿಸಿದ ಮದಾಂಧರ

ಗಾಯಕರ ಪಾಠಕರ ಭಂಡರ ಬಯಕೆಗಳ ಬಯಸೀ
ಬಾಯಬಡಿಕರು ಬಗುಳುವರು
ನಿಶೆಯಃ ಸಾಭ್ಯಾಸಿಗಳ ನಿಂದಿಪ
ನಾಯಿಗ್ಯಾತಕೆ ನವರಸಾಂನವು ಮಗನೆ ಕೇಳೆಂದಾ ॥೩೨॥

ಮನಕೆ ರಾಗದ್ವೇಷ ಬುದ್ಧಿಯ
ನೆನಹು ದುರ್ವ್ಯಸನದಲಿ ತನುವಿದು
ವನಿತೆಯೊಡಗೂಟದಲಿ ಭೋಗಾಸಕ್ತಿಯಾಗಿರಲೂ
ತನಗೆ ತತ್ವಜ್ಞಾನ ಚಿಂತೆಯು
ಘನತೆ ದೊರಕುವದೆಂತು ಮಾಯಾ
ಜನಿತ ದುರ್ವಾಸನೆಯೊಳೊಂದಿದ ಮರುಳು ಮಾನವನೇ ॥೩೩॥

**ಅಂತ್ಯ :** ಓಲೆಪುಟ ೭೬ (ಹಿಂಭಾಗ)

ದೇವ ಜಯ ಜಯ ಭಕ್ತನಿಕರವ
ಕಾವ ಜಯ ಜಯ ಸಕಲ ನಿರ್ಜರ
ದೇವ ಜಯ ಜಯ ಜಯ ಜನಾರ್ದನ ಬಂಧು ಜಯ ಜಯತು
ಪಾವಕಾಂಬಕ ಫಣಿ ವಿಭೂಷಣ
ಕಾಮಮರ್ದನ ಸಕಲ ಲೋಕದ
ಜೀವದಂತರ್ಯಾಮಿ ಸಲಹುಗೆ ಮಲ್ಲಿಕಾರ್ಜುನನೇ ॥೩೦॥

ಯಿತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲಭೃಂಗಾಯಮಾನ ಸಹವಾಸಿ ಮಹಲಿಂಗರಂಗ ವಿರಚಿತಮಪ್ಪ ಅನುಭವಾಂಮ್ರುತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನೆ ಮಲ್ಲಿಕಾರ್ಜುನ ಸ್ತುತಿ ಪ್ರಕರಣ ಯೆಕಾದಶೋಧ್ಯಾಯಃ॥ ಅಂತೂ ಅಧ್ಯಾಯ ೧೧ಕ್ಕಂ ಪದನೂ ೮೦೫ಕ್ಕಂ ಜಯ ಮಂಗಳಂ ಮಹಾ ಶ್ರೀ (೧೯ ಶ್ರೀ ಕಾರಲಿಪಿಯಿದೆ) ಶ್ರೀ ಲಕ್ಷ್ಮೀ ವೆಂಕಟೇಶ ಪ್ರಸನ್ನಾ॥ ಶ್ರೀ ಸಾಂಬಶಿವಾರ್ಪಣಮಸ್ತು॥ ಸಮಸ್ತ ಮಂಳಾನಿ ಭವಂತೂ॥

**ವಿ.ವಿ :** ಅಸಮಗ್ರ, ಓಲೆಗಳು ಬಹಳಷ್ಟು ಶಿಥಿಲವಾಗಿವೆ. ೨೭ನೇ ಪದ್ಯದ ಗರಿಯಿಂದ ೭೬ನೇ ಪುಟದವರೆಗೆ ಗರಿಗಳಿವೆ. ಹ. ಪ್ರ. ನಂ. ೧ ಮತ್ತು ೩೧ ರಲ್ಲಿಯೂ ಅನುಭವಾಮೃತ ಗ್ರಂಥಗಳಿವೆ.

## 3

## ಅನುಭವಾಮೃತ

| | | |
|---|---|---|
| ನಂ : ಓ/೨೧ | ಮಹಲಿಂಗರಂಗ | ೫೪ ಅಕ್ಷರ |
| ೩೩-೩ × ೫-೬ ಸೆಂ.ಮೀ | ಸು. ಕ್ರಿ.ಶ. ೧೬೭೫ | ೯ ಸಾಲು |
| ೬೫ + ೧ ಪತ್ರ | ಷಟ್ಪದಿ | ಕನ್ನಡ |

**ವಿಷಯ : ತತ್ವಬೋಧೆ**

**ಆದಿ : ಓಲೆಪುಟ ೧**

ಶ್ರೀ ಮಹಾಗಣೇಶ್ವರ ಶಾರದಾಗುರುಭ್ಯೋನಮಃ । ಶ್ರೀ ಅಮರಗಿರಿವಾಸಾಯ ನಮಃ । ಶ್ರೀ ಸೀತಾರಾಮಾಭ್ಯಾಂ ನಮಃ । ಅನುಭವಾಮೃತವ ಬರಉದಕ್ಕೆ ನಿರ್ವಿಘ್ನ ಮಸ್ತೂ ॥

ಗಜಾನನಂ ಭೂತಗಣಾದಿ ಸೇವಿತಂ ।
ಕಪಿತ್ಥ ಜಂಬೂ ಫಲಸಾರ ಭಕ್ಷಿತಂ ।
ಉಮಾಸುತಂ ಶೋಕವಿನಾಶ ಕಾರಿಣಂ ।
ನಮಾಮಿ ವಿಘ್ನೇಶ್ವರ ಪಾದಪಂಕಜಂ ॥

ವ್ಯಾಸಂ ವಶಿಷ್ಠನಪಾರಂ ಶಕ್ತೇಃ ಪೌತ್ರಮಕಲ್ಮಷಂ ।
ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಂ ॥

ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೇ ।
ಅಮೃತೇಶಾಯ ಶರ್ವಾಯ ಮಹಾದೇವಾಯ ತೇ ನಮಃ ॥

ನಾರಾಯಣ ನಮಸ್ತೇಸ್ತು ಶಂಖ ಚಕ್ರ ಗದಾಧರ ।
ದಾಮೋಧರಾರವಿಂದಾಕ್ಷ ಗೋವಿಂದ ಯದುನಂದನಹಃ ॥

ವ್ಯಾಸಮುನಿಪತಿ ಶುಕಮುನಿಗೆ ಸಂ
ತೋಷದಿಂದಲಿ ತತ್ವಬೋಧೆಯ
ಲೇಸೆನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿಯೇ ॥ಪದನೂ॥

ಶ್ರೀಮದನುಪಮತೇಜ ನತಜನ
ಕಾಮಿತಾರ್ಥ ಫಲಪ್ರದಾಯ

ಸೋಮಶೇಖರ ಸುರಮುನೀಂದ್ರಾರ್ಚಿತ ಪದಾಂಭೋಜಾ
ಸಾಮಗಾನಪ್ರಿಯ ಸದಾಶಿವ
ವಾಮಭಾಗಾಶ್ರಿತ ಭವಾನೀ
ಪ್ರೇಮಶ್ರೀಗಿರಿ ಮಲ್ಲಿಕಾರ್ಜುನ ಸಲಹು ಮೂಜಗವಾ ॥೧॥

**ಅಂತ್ಯ** : ಓಲೆಪುಟ : ೬೫ (ಹಿಂಭಾಗ) ಸಾಲು : ೩

ಸರ್ವಲೋಕಾಧ್ಯಕ್ಷ ಜಯ ಜಯ
ಸರ್ವಲೋಕಾಧಾರ ಜಯ ಜಯ
ಸರ್ವಮಂಗಳರರಸ ಜಯ ಜಯ ಸರ್ವ ಸರ್ವೇಶಾ
ಗರ್ವಿತಾಸುರ ಮಥನ ಜಯ ಜಯ
ದುರ್ವಿದಗ್ಧದುರಾಪ ಜಯ ಜಯ
ಪರ್ವತಾಧಿಪ ಮಲ್ಲಿಕಾರ್ಜುನ ದೇವ ಜಯ ಜಯತೂ ॥೨೯॥

ಯಿತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲ ಭೃಂಗಾಯಮಾನ ಸಹವಾಸಿವಂಶ ಮಹಲಿಂಗರಂಗ ವಿರಚಿತ ಅನುಭವಾಮೃತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನಮಲ್ಲಿಕಾರ್ಜುನ ಸ್ತುತಿ ಪ್ರಕರಣಯೇಕಾದಶಃ ಸಂಧಿ ಸಂಪೂರ್ಣಂ ॥–॥ ಅಂತ್ತೂ ಸಂಧಿ ೧೧ಕ್ಕಂ ಪದನೂ ೮೦೧ಕ್ಕಂ ಮಂಗಳ ಮಹಾ ಶ್ರೀ (೧೦ ಶ್ರೀಕಾರಗಳಿವೆ) ಶ್ರೀ ರಾಮಾರ್ಪಣಮಸ್ತೂ ॥ ಶ್ರೀಮದ್ಗುರು ಕೃಷ್ಣಾನಂದಮನ್ನಾಥ ಯೋಗೀಂದ್ರ ದಿವ್ಯ ಶ್ರೀ ಚರಣಾರವಿಂದಾಭ್ಯಾಂನ್ನಮಃ (ಯಾದೃಶೀ ಪುಸ್ತಕಂದೃಷ್ಟ್ವ ...ಶ್ಲೋಕವಿದೆ) ಅಕ್ಷರಂಯ × ರಿಭ್ರಷ್ಟಂ ಮಾತ್ರಾಣೀನಂ ನಕಾರಯೆತ್ । ಕ್ಷಂತುಮರ್ಹಥವಿದ್ವಾಂಸಃ ಪಿತಾಮತ್ರಪರಾಧವತ್ ॥ಶ್ರೀ॥ ಪ್ರಹಲ್ಲಾದನಾರದಪರಾಶರ ಪುಂಡರೀಕವ್ಯಾಸಾಂಬರೀಷಶುಕ ಶೌನಕ ಭೀಷ್ಮದಾ×೦। ರುಕ್ಮಾಂಗದ ಅರ್ಜುನ ಬಲಿಭೃಗು ಧೃವವಷಿಷ್ಟ ವಿಭೀಷಣ್ಯಾನಿಮಾಂ ಪರಮ ಭಾಗವತಾ್ಪರಾಮಿ

**ವಿ.ವಿ.** : ಸಮಗ್ರ, ಅಕ್ಷರ ಸ್ಫುಟವಾಗಿ ಸುಲಭಗ್ರಾಹ್ಯವಾಗಿದೆ. ೨೭ನೇ ಗರಿ ಸ್ವಲ್ಪ ಮುರಿದಿದೆ. ೨೧ನೇ ಗರಿಯ ಹಿಂಭಾಗದಲ್ಲಿ ಈ ಗ್ರಂಥದ್ದಲ್ಲದ ನಾಲ್ಕು ಸಾಲುಗಳನ್ನು ಬರೆದಿದ್ದು ಅದನ್ನು ''ಯಿಾ ನಾಲ್ಕು ಪಂಗ್ತಿಯಿಂದರದ್ದಲ್ಲ'' ಎಂದೂ ಐದನೇ ಪಂಕ್ತಿಯ ಬಳಿಯಲ್ಲಿ ''ಯೀ ಪಂಕ್ತಿಯಿಂದ ಪೋದುವುದು'' ಎಂದೂ ಟಿಪ್ಪಣಿ ಹಾಕಿದೆ. ಈ ನಾಲ್ಕು ಪಂಕ್ತಿಗಳಲ್ಲಿ ರಾಮಾಯಣದ ಕಥೆಯನ್ನು ಷಟ್ಪದಿಯಲ್ಲಿ ಬರೆದಿದ್ದು ೧೯, ೨೦ನೇ ಪದ್ಯಗಳಿವೆ.

ಯೆಂದು ನಿಜವನು ಕೋರಿ ಮುನಿರಘು
ನಂದನೋಪಾಖ್ಯಾನವನು ಮುದ
ದಿಂದ ಸಂಕ್ಷೇಪದಲನುಗ್ರಯಿಸುತ್ತ ಹಸೆಯಲೀ
ಸಂದನಜವಾರಿಯರಿಗತ್ತಲೀ ಮುನಿ
ಕಂದೆರವಮಾಡಿದನು ಕೇಳರ
ವಿಂದಮುಖಿ ಲೋಕದಲಿ ರಾಮಾಯಣ ಕಥಾಮ್ರುತವಾ

ಇದೇ ಕಟ್ಟಿನಲ್ಲಿ 'ಗೋಪಿಕಾಗೀತೆ ಟೀಕು ॥ ಕೃಷ್ಣಚರಿತ್ರೆ' (೨೧/೨)ಯೂ ಇದೆ. ಹಸ್ತಪ್ರತಿಸಂಖ್ಯೆ ೧ ಮತು೧೨ರಲ್ಲಿಯೂ ಅನುಭವಾಮೃತ ಗ್ರಂಥಗಳಿವೆ. ಇದರೊಂದಿಗೆ ಇದೇಬರವಣಿಗೆಯಿರುವ ಅರ್ಥ ಮಾತ್ರ ಇರುವ ಗರಿಯೊಂದಿದೆ. ಅದರ ಒಂದು ಸಾಲು ಹೀಗಿದೆ. ॥೩॥ ಚಿತ್ತವಿಸು ಮುನಿವರ್ಯ ನಿರ್ಗುಣ ವಸ್ತುವಿಂಗುಪಚಾರ ಕಲ್ಪನೆ ಯೆತ್ತಣವು''....

4

## ಅಲ್ಲಮ ಪ್ರಭುರಾಯನ ಸಾಂಗತ್ಯ

| | | |
|---|---|---|
| ನಂ. ೬/೧೩ | ? | ೪೨ ಅಕ್ಷರ |
| ೩೪–೯ × ೪–೭ ಸೆಂ.ಮಿ. | ? | ೫ ಸಾಲು |
| ೧೧೧ ಪತ್ರ | ಸಾಂಗತ್ಯ | ಕನ್ನಡ |

**ವಿಷಯ :** ಅಲ್ಲಮ ಪ್ರಭುವಿನ ಕಥೆ

**ಆದಿ :** ಓಲೆಪುಟ ೩

× × × ಸಬ್ಬಿರೆ ಸೊನೆಗರವೇ॥
ತುದಿ ಮೊದಲಾಗಿ ಕೆಳ್ವವರ ಪಂಚಾಮ್ರುತಾ
ನದಿಯೊಳಗದ್ದಿ ಮುಳುಗಿಪೆಯುಲ್ಲ ಪುರಾತರ ಶ್ರೀಚರಣ × × ನದಲ್ಲಿ

ಉಲ್ಲಾಸದಿಂದಲಿ ಹರುಶದಲೀ
ಅಲ್ಲಮ ಪ್ರಭುರಾಯನ ಸಾಂಗತ್ಯವಾ
ಸೊಲ್ಲಿಸುವೆನು ಬಲ್ಲಂತೆ

ರೊಖ್ಯಾವನೀಯದೆ ಮಾಣಲಿಗುಣವಾತಾ।

ನಕ್ಕಂರಿಂದಲಿ ಕೇಳಬೆಕೊ
ಬಿಕ್ಕಾನೆ ಬೀಗಿ ಗರ್ವದಲಿ ಹಬ್ಬುಳರಾ
ಯಕ್ಕಿ ಕಾರ್ಯಕೆ ಗುರಿಯಾಗಿ ॥೨೦॥

ಸಪ್ತವಾರುಧಿಯ ವಿಸ್ತೀರ್ನವ ಪೋಗಳ್ವಡೆ
ನೆತಿಗಗಂಣವಗಳವಲ್ಲಾ
ಮೊತ್ತಾದ ಬುದ್ಧುವಥೆರೆ ಸೊರೆ ತುಂತುರೂ
ವೊತ್ತುವ ಭರತದಿಂದೆಸೆಯೇ ॥೨೧॥

ಸುಳಿದು ಮುಳುಗಿ ಫುಳಫುಳಿಸುವದೆಸೆಗದು
ಹೊಳದು ಹ್ಯೊಉತ ಭೋರ್ಗರದೂ
ಸೆಳೆದು ಹಿಂದಕೆ ಹೋಗಿ ತುಳುಕುವ ವಾರುಧಿ
ಕಳೆಯನದೇನ ವರ್ನಿಸುವೆ × ॥೨೨॥

**ಅಂತ್ಯ :** ಓಲೆಪುಟ ೧೧೬

ಯೇಕಚಿತ್ತದಲಲ್ಲದೆ ಪರಚಿತ್ತಾದಿ
ಯಿಾ ಕೃತಿಯು × × × × × ರೈ
ನಾಲ್ಕು ಯೊಗಲು ಧುರವಹುದು ಕ್ರುತಾಂತನಾ
ಆಕಾರ ನೆಲೆ ಸಿಲುಕುವದೂ ॥೧೫೩॥

ಮೇಧಿನಿಯೊಳು ಪ್ರಭುವಿನ ಸಂ
× × × × × ನಾದಾರದಿಂದ ಕೆಳಿದರೆ
ಸಾದಕವಹುದು ಸಕಲ ಸುಖ ಕಡೆಯಲಿ
ಆದಿಶಿವನು × × ಣಿಪನೂ ॥೧೫೪॥

ಕಲಿನಾಶನ × ಪಾದನಭವಾ
ಶರಧಿ ವಡಬಾನಲ ಲಹಿತಾ
ಕರುಣಾಕರ ವಿಶ್ವಭರಿತನಲ್ಲಮು ಪ್ರಭೂ
ಗುರುವರನಡಿಗೆ ವಂದಿಸುವೇ ॥೧೫೫॥

**ವಿ.ವಿ.** : ಅಸಮಗ್ರ, ಓಲೆ ಪುಟ ೯೩ ರಲ್ಲಿ ಅಂತೂ ಸಂಧಿ ೬ ಕ್ಕಂ ಪದನೂ ೭೨೭ ಕ್ಕಂ ಮಂಗಳ ಮಹಾ ಶ್ರೀ ಶ್ರೀ ಹಾಗೂ ಶ್ರೀ ಉಮಾ ಮಹೇಶ್ವರಾಯ ನಮಃ, ಗುರು ಬಸವ ಲಿಂಗಾಯನಮಃ, ಶ್ರೀ ಚಂದ್ರಶೇಖರಾಯನಮಃ ಇತ್ಯಾದಿ ಉಲ್ಲೇಖ

ಗಳಿವೆ. ೭ನೇ ಸಂಧಿಯ ೧೫೫ನೇ ಪದ್ಯದವರೆಗೆ ಗ್ರಂಥವಿದೆ. ಬಹಳಷ್ಟು ಗರಿಗಳ ಹಿಂಭಾಗದಲ್ಲಿ ಬರವಣಿಗೆಯಿಲ್ಲ. ಬರಹ ಸುಂದರವಾಗಿ ಸ್ಫುಟವಾಗಿದೆ. ಪ್ರಾರಂಭದ ಎರಡು ಗರಿಗಳು ಕಾಣಸಿಗುವುತಿಲ್ಲ. ಅನೇಕ ಗರಿಗಳು ತ್ರುಟಿತವಾಗಿವೆ.

## 5

## ಉತ್ತರ ರಾಮಾಯಣ

| | | |
|---|---|---|
| ನಂ. ಓ/೨೦ | ವಾಲ್ಮೀಕಿ | ೫೮ ಅಕ್ಷರ |
| ೨೭ × ೪–೨ ಸೆಂ.ಮಿ. | ಸು. ಕ್ರಿ.ಪೂ. ೫೦೦೦ | ೧೦ ಸಾಲು |
| ೧೨೪ ಪತ್ರ | ಶ್ಲೋಕ | ಸಂಸ್ಕೃತ |

**ವಿಷಯ :** ರಾಮಾಯಣ ಕಥೆ

**ಆದಿ :** ಓಲೆಪುಟ ೧

ಶುಭಮಸ್ತು॥ ಶ್ರೀ ರಾಮಾಯ ನಮಃ॥ ಶ್ರೀ ಲಕ್ಷ್ಮೀ ನರಸಿಂಹಾಯ ನಮಃ॥
ಉತ್ತರ ರಾಮಾಯಣ ಬರವುದಕ್ಕೆ ಶ್ರೀ ಗುರುಭ್ಯೋ ನಮಃ
ಪ್ರಾಪ್ತರಾಜ್ಯಸ್ಯ ರಾಮಸ್ಯ ರಾಕ್ಷಸಾನಾಂ ವಧೇಕೃತೆ ।
ತ್ರಿಜಗ್ಮುಃ ರುಷಯಹಃ ಸರ್ವೆ ರಾಘವಂ ಪ್ರತಿನಂದಿತುಂ ॥
ಕೌಶಿಕೋಥಯ ವಕ್ರಿತೋರ್ಗ್ಯೆಭ್ಯಶ್ಚ ನಳಯೇವ ಚ ।
ಕಣ್ವೋಮೆಧಾತಿಥೆ ಪುತ್ರಃ ಪೂರ್ವಸ್ಯಾಂದಿಶಿಯೆ ಸ್ಮಿತಾಃ ॥
ಸ್ವತ್ಯಾತ್ರಯಶಿ ಭಗವಾರ್ನ್ನುಮಹಃ ಪ್ರಮುಚಸ್ತಥಾ ।
ತ್ರಿಜನ್ಮಸ್ತೆ ಸಹಾಗಸ್ತ್ಯಾಯ ಶ್ರಿತಾ ದಕ್ಷಿಣಾಂ ದಿಶಂ ॥

**ಅಂತ್ಯ :** ಓಲೆಪುಟ ೧೨೦

ಅಯೋಧ್ಯಾಪಿ ಪ್ರಶರಂ ಮ್ಯಾ ಬಹುವರ್ಷಗಣೆನ್ನ ಹೂರ್ ।
(×) ಎತದಾಖ್ಯಾನಮಭ್ಯಗ್ರಃ ಸಭವಿಷ್ಯಂ ಸಹೋತ್ತರಂ ॥
ಕೃತವಾನ್ನ ಚೆತಸಃ ಪುತ್ರಃ ತದ್ಬ್ರಂಹ್ಮಾಪ್ಯನುಮನ್ಯತೆ ।
ರಾಮಾಯಣಮಿದಂ ಕಾವ್ಯಂ ಶೃಣ್ವಾತಃ ಪಠತಸ್ತಥಾ ॥
ಪ್ರಿಯ್ಯತೆ ಭಗವಾರ್ ರಾಮಃ ಸಹಿವಿಷ್ಣುಃ ಸನಾತನಃ ।
ಗ್ರಾಮೈರ್ವಸ್ತೈಸ್ತಥಾ ಧಾನ್ಯೈರ್ಹಿರಂಣ್ಯಾಯೈ ಸ್ವಸ್ತಿ ಲೇಪನ್ಯೈಃ ॥

ಸಯಾತಿ ಪರಮಂ × × × ....ತ್ರಿಮತಿಃ
ಇತ್ಯುತ್ತರೆ ಶ್ರೀ ರಾಮಾಯಣೆ ವುತ್ತರಕಾಂಡೆ ದಶಶತತಮಸ್ಸರ್ಗಃ॥ ವಾಲ್ಮೀಕಯೆ ಮುನೀಂದ್ರಾಯ ಕವಿತಾಮೃತ ಸಿದ್ಧಯೆ॥ ವುತ್ತರ ರಾಮಾಯಣ ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ....

**ವಿ.ವಿ :** ಸಮಗ್ರ, ಲಿಪಿ ಸುಲಭಗ್ರಾಹ್ಯ. ಅಲ್ಲಲ್ಲೆ ಗರಿಗಳು ಮುರಿದಿವೆ.

6

## ಉದಯರಾಗ ಕೀರ್ತನೆಗಳು

| | | |
|---|---|---|
| ನಂ. ಓ/೪೩/೨ | ತಿಮ್ಮಪ್ಪದಾಸ | ೧೦೪ ಅಕ್ಷರ |
| ೪೭ × ೩–೮ ಸೆಂ.ಮೀ. | ಕ್ರಿ.ಶ. ೧೮೬೦ | ೮ ಸಾಲು |
| ೨ ಪತ್ರ | ಕೀರ್ತನೆಗಳು | ಕನ್ನಡ |

**ವಿಷಯ :** ದೇವರನ್ನು ಎಚ್ಚರಿಸುವ ಕೀರ್ತನೆಗಳು

**ಆದಿ :** ಓಲೆಪುಟ : ೩೩ ಬದಿಯಲ್ಲಿ : ಉದಯರಾಗ.

ಶ್ರೀ ವಾಸುದೇವಾಯನಮಃ ॥ ರಾಗ ॥ ಉದಯರಾಗ ॥

ಬೆಳಗಾಗಲೆದ್ದೆನಾನೀಗ ಜಾಗ್ರದಲಿ
ಮಲಗಿದ್ದು ನಿದ್ರೆ ತಿಳಿವನಕರಾತ್ರೆಯಲಿ ॥ಪಲ್ಲ॥
ಬ್ರಹ್ಮತಾನೆಂದೆಂಬ ಬಾನುಬಳಿಕಸ್ತಮಿಸಿ
ಹಂಮೆಂಬ ಸಂಜೆಗತ್ತಲೆಯಡರಲು
ಉಂಮಳಿಪ ವಿಷಯರೂಪದ ಮಾಯೆಸಡುವಿರುಳು
ಜುಂಮೆನುತಮ್ಮೈಮರದ ವಿದ್ಯೆಯಲಿ ಮುಳುಗಿ ॥೧॥

**ಅಂತ್ಯ :** ಓಲೆಪುಟ ೩೪ (ಹಿಂಭಾಗ), ಸಾಲು ೫.

॥೨೪॥ ಪರಮಾತ್ಮನೊಡನಾಡಿ ಪರಮಪಾವನರಾಗಿ
ಮೆರವಗೋಪೀರತ್ನ ಮಾಲೆಯೊಡನೆ
ನೆರೆಶಿಖಾಮಣಿಯೆನಿಸಿ ತಿರುಪತಿಯ ವೆಂಕಟನು
ಧರಣಿಯೊಳು ಸಕಲರನು ನೆರೆಸಲಹುತಿಹನೂ ॥೨೫॥

**ವಿ.ವಿ.** : ಸಮಗ್ರ, ಓದಲು ಸುಲಭಗ್ರಾಹ್ಯ. ಒಟ್ಟು ೩ ಕೀರ್ತಗಳೂ ೩೫ ನುಡಿಗಳೂ ಇವೆ. ೩ನೇ ಕೀರ್ತನೆಯೊಂದರಲ್ಲೇ ೨೫ ನುಡಿಗಳಿವೆ. ಇದೇ ಕಟ್ಟಿನಲ್ಲಿ 'ಕೃಷ್ಣಾಷ್ಟೋತ್ತರ ಶತನಾಮಪುರ್ವಾಕ್ಪುಷ್ಪ ಪೂಜಾ ಕೀರ್ತನೆಗಳು' ಮತ್ತು 'ಕಾಯ ಜೀವ ಸಂವಾದ' ಕೀರ್ತನೆಗಳೂ ಇವೆ.

7

**೩ಋಣ ಕೀರ್ತನೆಗಳು**

| | | |
|---|---|---|
| ನಂ. ಓ/೬೧/೧ | ತಿಮ್ಮಪ್ಪದಾಸ | ೯೮ ಅಕ್ಷರ |
| ೩೬–೨ × ೩–೫ ಸೆಂ.ಮೀ. | ಕ್ರಿ.ಶ. ೧೮೬೦ | ೭ ಸಾಲು |
| ೫ ಪತ್ರ | ಕೀರ್ತನೆಗಳು | ಕನ್ನಡ |

**ವಿಷಯ** : ಗುರುಸ್ತುತಿ ಕೀರ್ತನೆಗಳು.

**ಆದಿ** : ಓಲೆಪುಟ ೧

ಶ್ರೀ ರಾಮಾಯನಮಃ ।।ರಾಗ।।
ಕಣೆದಿರಿಗೆ ಬಂದು ನಿಂದೆಯು ಗುರುವೆ
ಯೆನವಗುಣಗಳನೆಣಿಸದೆ ಕೃಪೆಯಿಂದಾ ॥ಪಲ್ಲ॥
ಆರುದಿಕ್ಕಿಲ್ಲದನಾಥನಪರಾಧದಿ
ಕಾರಾಗಾರದಿ ಸಿಕ್ಕಿ ಕೊರಗುತಿರಲು ಕಂಡು
ದೂರ ತೊಲಗೆ ಸರ್ವಜನರದಕರಸನೆ
ಬಾರೆಂದು ಕರೆದು ಮರುಗಿ ಪೊರೆದಂದದಿ ।।೧।।

**ಅಂತ್ಯ** : ಓಲೆಪುಟ ೫ (ಹಿಂಭಾಗ) ಸಾಲು ೩

ಶರಣು ಹೊಕ್ಕೆನು ನಿಂನಚರಣಕಮಲವನು ವೆಂಕಟೇಶ
ಕರುಣದಿಂದಭಯವಕೊಟ್ಟು ರಕ್ಷಿಸಬೇಕು ವೆಂಕಟೇಶ ।।ಪಲ್ಲ।।
ಅನುಪಮಚರಿತನೆ ಆನಂದರೂಪನೆ
ಇನಕೋಟಿ ಸಂಕ × ಶ ಈಶ್ವರಮಿತ್ರನೆ ವೆಂಕಟೇಶ ।।೧।।

**ವಿ.ವಿ.** : ಅಸಮಗ್ರ, ಲಿಪಿ ಸುಂದರ, ಸ್ಫುಟವಾಗಿದೆ. ಓಲೆಪುಟಗಳ ಆರಂಭದಲ್ಲಿ ಎರಡೂ ಕಡೆ ೩ಋಣ ಎಂದು ಬರೆಯಲಾಗಿದೆ. ಮೊದಲನೆಯ ಗರಿಗೆ ಮಾತ್ರ ಪುಟಸಂಖ್ಯೆಯಿದೆ. ಉಳಿದವಕ್ಕೆ ಇಲ್ಲ, ಕೊನೆಯ ಗರಿಯ ಕೀರ್ತನೆ ೫ನೇ ನುಡಿಗೆ ನಿಂತಿದೆ.

8

## ಋಣ ಕೀರ್ತನೆಗಳು

| | | |
|---|---|---|
| ನಂ. ೬/೧೧/೧ | ತಿಮ್ಮಪ್ಪದಾಸ | ೭೩ ಅಕ್ಷರ |
| ೩೮-೪ × ೩-೪ ಸೆಂ.ಮೀ. | ಕ್ರಿ.ಶ. ೧೮೬೦ | ೬ ಸಾಲು |
| ೭ ಪತ್ರ | ಕೀರ್ತನೆ | ಕನ್ನಡ |

**ವಿಷಯ :** ಗುರುಸ್ತುತಿ ಕೀರ್ತನೆಗಳು.

**ಆದಿ :** ಶ್ರೀರಾಮಾನವುಯಃ.

॥ಕಂದ॥ ಶ್ರೀ ಗುರು ಚರಣಾರಾಧನೆ
ಯೋಗಬಲದಿಂದ ದುಷ್ಕರ್ಮಾನುಭವದಿನಾಂ
ರಾಗದ ಎಣಿತಿರೆಬರಲುವಿ
ರಾಗವು ರೃಣ ಮೂಲದಿಂದಲದನನುವ [೦] ದಿಪೆಂ

॥ರಾಗ॥ ರೃಣವ ಮಾಡಿದ ಪತಿತನುನಾನು
ಸ್ಮೃತಿಧನವನಿತ್ತುಳುಹು ಸೀತಾರಾಮ ನೀನು ॥ಪಲ್ಲ॥
ಹಿರಿಯರ ಮಾತನು ಹಿಂದುಗಳೆದು ಮುಂದೆ
ಬರುವ ದುಃಖಂಗೊಳ ಬಗೆಗೊಳದೆ
ದುರದುಂಬಿತನದಿಂದ ದುಷ್ಟಸಂಗತಿಗೈದು
ಪರರ ಮೆಚ್ಚಿಸಿಬಾಳ್ವ ಪೌರುಷ್ಯವನು ನೀಗಿ ॥೧॥

**ಅಂತ್ಯ :** ಓಲೆಪುಟ ೬ (ಹಿಂಭಾಗ) ಸಾಲು ೪ ॥ರಾಗಾ॥
ಶರಣು ಶರಣು ಶರಣು ಶ್ರೀ ಗಣನಾಥ ಶರಣು ಶಾರದೆಯೆ
ಶರಣು ವೆಂಕಟರಮಣ ಶರಣು ಸದ್ಗುರುವೆ ॥ಪಲ್ಲ॥
ಶರಣು ಮಾತೆಯೆ ಪಿತನೆ । ಶರಣು ಹಿತಬೋಧಕರೆ
ಶರಣು ಬುದ್ಧಿಪ್ರದರೆ ಶರಣು ಸುಖಕರರೆ
ಶರಣು ವೇದಾಂಬೋಪದೇಶಕರೆ ಪೋಷಕರೆ
ಶರಣು ಚಂನಾಂಬೆ ಶ್ರೀ ನಾರಾಯಣಾರ್ಯ ॥೧॥
ಶರಣು ನಾರಾಯಣಾಚಾರ್ಯಸದ್ಗುರುವರ್ಯ
ಶರಣು ಶ್ರೀ ವಾಸುದೇವಾರ್ಯ ಗುರುವರ್ಯ
ಶರಣು ಶ್ರೀ ಕೃಷ್ಣಯೋಗೀಂದ್ರ ಸದ್ಗುಣಸಾಂದ್ರ
ಶರಣು ಶ್ರೀ ವೆಂಕಟದಾಸಾರ್ಯ ಗುರುವರ್ಯ ॥೨॥

ಶರಣು ವಿಪ್ರೋತ್ತಮರೆ ಶರಣು ಪತಿವ್ರತೆಯರೆ
ಶರಣು ಹರಿಹರಭಕುತರೆ ಮಹತ್ತಮರೆ
ಶರಣು ಚಿಕನಾಗಪುರವಾಸ ವೆಂಕಟೇಶ
ಶರಣು ಮರೆಯೊಕ್ಕೆ ನಿಂಮನಾನು ತಿಂಮದಾಸಾ ॥೩॥–॥

**ವಿ.ವಿ.** : ಅಸಮಗ್ರ, ಪುಟಸಂಖ್ಯೆಯಿಲ್ಲ (ಅನುಕೂಲಕ್ಕಾಗಿ ಹಾಕಿಕೊಳ್ಳಲಾಗಿದೆ) ೪ನೇ ಗರಿಯವರೆಗೆ ಮಾತ್ರ ಪ್ರತಿ ಗರಿಯ ಎರಡೂ ಬದಿಗಳಲ್ಲಿ 'ರೃಣ' ಎಂದು ಬರೆಯಲಾಗಿದ್ದು ಈ ಗರಿಯ ಹಿಂಭಾಗದಲ್ಲಿ "ಯಿೂ ಸಮಯದಲಿ ಸುಂಮನಿರುವರೆರಾಮಾದಾಸಾನುದಾಸನೊಳು ತೋರದೆ ಪ್ರೇಮ ॥ಪಲ್ಲ॥" ಎಂಬಕೀರ್ತನೆಯ ೩ನೇ ನುಡಿಯನಂತರ 'ವಿನಾವೆಂಕಟೇಶಂ' ಮತ್ತು 'ಅಹಂದೂರತಸ್ತಿ' ಎಂಬ ಎರಡು ವೆಂಕಟೇಶ ಶ್ಲೋಕಗಳಿರುವ ೨ಸಾಲುಗಳು ಮಾತ್ರ ಇವೆ. ೫ನೇ ಗರಿಯಿಂದ ಮಂಗಳಸ್ತುತಿ ಕೀರ್ತನೆಗಳಿವೆ.

ಈ ಗ್ರಂಥದ ಮೊದಲು ಬಿಡಿ ಕೀರ್ತನೆಗಳಿರುವ ಒಂದು ಬಿಡಿ ಗರಿಯಿದೆ. ೧ ಎಂದು ಪುಟಸಂಖ್ಯೆಯಿದೆ. ಈ ಗರಿಯಲ್ಲಿ

ಗಣಪತಿಯೆ ಪಾಲಿಸೈಮತಿಯನು
ಅಂಬಾ ಮೈದೋರು ಶಾರದಾಂಬ
ನೀನೊಲಿಯಬೇಕು ನೀನೊಲಿಯಬೇಕು ವಿಜ್ಞಾನ ಹೀನನಿಗೆ

ಎಂಬ ಮೊದಲ ಸಾಲುಗಳುಳ್ಳ ಮೂರು ಕೀರ್ತನೆಗಳಿವೆ. ಈ ಗ್ರಂಥದ ಜೊತೆಯಲ್ಲೇ ಇದೇ ಕಟ್ಟಿನಲ್ಲಿ ೧೧/೨ನೇ ನಂಬರಿನ ಕೀರ್ತನೆಗಳ ಇನ್ನೊಂದು ಗ್ರಂಥವೂ ಇದೆ.

9

## ಕರ್ನಾಟಕ ಭಾರತ ಕಥಾಮಂಜರಿ

| | | |
|---|---|---|
| ನಂ. ೬೯/೧ | ಕುಮಾರವ್ಯಾಸ | ೭೬ ಅಕ್ಷರ |
| ೩೮–೪ × ೫ ಸೆಂ.ಮೀ. | ಕ್ರಿ.ಶ. ೧೪೩೦ | ೧೧ ಸಾಲು |
| ೨೪೮ ಪತ್ರ | ಭಾಮಿನಿ ಷಟ್ಪದಿ | ಕನ್ನಡ |

**ವಿಷಯ** : ಮಹಾಭಾರತದ ಸಭಾ ಭೀಷ್ಮ ಮತ್ತು ಅರಣ್ಯ ಪರ್ವಗಳು.

**ಆದಿ** : ಓಲೆಪುಟ ೧

ಶ್ರೀ ಗಣಾಧಿಪತಯೇ ನಮಃ॥ ಶ್ರೀ ಶಾರದಾಂಬಾಯ ನಮಃ॥ ಶುಭಮಸ್ತು॥

ಶ್ರೀ ಲಕ್ಷ್ಮೀವೆಂಕಟಾಚಲಸ್ವಾಮಿ ದಿವ್ಯ ಚರಣಾರವಿಂದವೇ ಗತಿಃ॥ ಶ್ರೀ ಗಂಗಾಧರಾಯ ನಮಃ॥ ಶ್ರೀ ಸ್ವ × × × ಪ್ರಮಾತಿ ನಾಮ ಸಂವತ್ಸರದ ಮಾಘ ಬ ೨ಯಲ್ಲು ಶಿವಗಂಗೆ ರಾಮೈಯ್ಯನವರ ಪುತ್ರ ಹರಿದಾಸನು ನರಸಿಂಗಪ್ಪನವರಿಗೆ ಬರೆದು ಕೊಟ್ಟ ಕರ್ನಾಟಕ ಭಾರತ ಕಥಾ ವಸ್ತುಕಕ್ಕೆ ಶುಭಮಸ್ತು॥ ಸೂಚನೆ॥ × × ×

ಶ್ರೀ ವನಿತೆಯುರರಸನೆ ವಿಮಳರಾ
ಜೀವಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನ ನಿಲದಾತಾರಾ ।
ರಾವಣಾಸುರವಮಥನ ಶ್ರವಣಸು
ಧಾವಿನೂತನ ಕಥನಕಾರಣ
ಕಾವುದಾನತ ಜನರ ಗುದುಗಿನ ವೀರನಾರಯಣಾ ॥೧॥

ವರಮಣಿಗಳಿಂದೆ ದಿವಮೌಳಿಯು
ನರಸಿಜಾರಿಯ ಕಿರಣಧೂಳಿಯು
ವಿರಚಿಸಿದ ಸಿಂಧೂರಖೊಳದಿ ಕುಣಿವ ಕುಂತಳವಾ
ಕರಿ ನಿಭಾಕೃತಿಯೆನಿಪ ವದನದ
ಕರದ ಪಾಶದ ಮೋದುಕ್ರದ ವಿ
ಸ್ತರದ ಗಣಪತಿ ಮಾಡೆಮಗೆ ನಿವಿಘ್ನದಾಯಕವ ॥೨॥

**ಅಂತ್ಯ** : ಓಲೆಪುಟ ೨೪೮ (ಬದಿಯಲ್ಲಿ) ಅರಣ್ಯ ಪರ್ವ ಸಂಪೂರ್ಣಂ

ಅಂತು ಅಧ್ಯಾಯ ೨೬ಕ್ಕಂ ಪದನು ೧೩೨೮ ಮಂಗಳ ಮಹಾ ಶ್ರೀ ಗಂಗಾಧರಾಯ ನಮಃ । ಶ್ರೀ ಲಕ್ಷ್ಮೀವೆಂಕಟಾಚಲಾಯ ನಮಃಯಿತಿ ಶ್ರೀಮದಚಿಂತ್ಯ ಗದುಗಿನ ವಿರನಾರಾಯಣನ ಚರಣಾರವಿಂದಪದಮಕರಂದ ಮಧುಪಾನ ಪರಿಕ್ಷಿತವ ಚೋಪಟ್ಟದ ನಿಕಾಯ ಶ್ರೀಮತ್ಕುಮಾರವ್ಯಾಸಯೊಗಿಂದ್ರ ವಿರಚಿತಮಪ್ಪ ಕರ್ನಾಟಕ ಭಾರತ ಕಥಾಮಂಜರಿಯೊಳರಣ್ಯ ಪರ್ವಸಂಪೂರ್ನ ಮಂಗಳ ಮಹಾ ।। ಶ್ರೀಶ್ರೀ....ಅಂತೂ ಪರ್ವ ೩ಕ್ಕಂ ಅಧ್ಯಾಯ ೬೫ ಪದ೩೮೫೫ಕಂ ಮಂಗಳ ಮಹಾ ।। ಶ್ರೀಶ್ರೀ.... ಗಂಗಾಧರಾಯನಮಃ ।।

**ವಿ.ವಿ.** : ಕೃತಿ ಅಸಮಗ್ರ, ಸಭಾ, ಭೀಷ್ಮ ಮತ್ತು ಅರಣ್ಯಪರ್ವಗಳಿವೆ. ಕೆಲವು ಗರಿಗಳ ಪ್ರಾರಂಭದಲ್ಲಿ ಕಥಾಸೂಚನೆ ಮತ್ತು ರೇಖಾ ಚಿತ್ರಗಳಿವೆ. ಇದೇ ಕಟ್ಟಿನಲ್ಲಿ ವಿರಾಟಪರ್ವ ಕಥೆಯಿರುವ ೬೯/೨ನೇ ಸಂಖ್ಯೆಯ ಗ್ರಂಥವೂ ಇದೆ. ಪ್ರತಿ ಚೆನ್ನಾಗಿದೆ, ಬರವಣಿಗೆ ಸ್ಫುಟವಾಗಿದೆ.

10

## ಕರ್ನಾಟಕ ಭಾರತ ಕಥಾಮಂಜರಿ

| | | |
|---|---|---|
| ನಂ. ೬೯/೨ | ಕುಮಾರವ್ಯಾಸ | ೬೩ ಅಕ್ಷರ |
| ೩೮–೪×೫ ಸೆಂ.ಮಿ. | ಕ್ರಿ.ಶ. ೧೪೩೦ | ೧೦ ಸಾಲು |
| ೯೬+೨ ಪತ್ರ | ಭಾಮಿನಿ ಷಟ್ಪದಿ | ಕನ್ನಡ |

**ವಿಷಯ :** ಮಹಾಭಾರತದ ವಿರಾಟ ಪರ್ವ ಮತ್ತು ಉದ್ಯೋಗ ಪರ್ವಗಳು.

**ಆದಿ :** ಓಲೆಪುಟ ೧

ಶ್ರೀ ಗಣಾಧಿಪತಯೇ ನಮಃ । ಶ್ರೀ ಶಾರದಾಂಬಾಯ ನಮಃ । ವಿರಾಟಪರ್ವ ಬರೆಯುವುದಕ್ಕೆ ಶುಭಮಸ್ತು ।।

**ಸೂಚನೆ :** ಕಾಯಿದರು ಸತ್ಯವನು ವನವಾ
ಸಾಯುತವ ನೆಲೆಗೆಲಿದುಪಾಂಡವ
ರಾಯರೋಲೈಸಿದರು ಬಂದು ವಿರಾಟ ನಗರಿಯಲಿ

ಕೇಳುಜನಮೇಜಯ ಧರಿತ್ರೀ
ಪಾಲಮುನಿಜನ ನೃಪದನಂಗಳ
ಬೀಳುಗೊಟ್ಟನು ಭೂಮಿಪತಿ ಬಲವಂದು ಹುತವಹನಾ
ಮೇಲು ಶಕುನದ ಚಾರುನಿನದವ
ನಾಲಿಸುತ ಸೋದರು ಸಹಿತವ
ನಾಲಯದ ಹೊರವಂಟು ಸಾರಿದರೊಂದು ವಟಕುಜವಾ

**ಅಂತ್ಯ :** ಓಲೆಪುಟ ೮೬ (ಹಿಂಭಾಗ) ಸಾಲು ೬

ಕರಸಿದ್ಯಷ್ಟದ್ಯು [ಮ್ನನ] ನುಸಂ
ಗರಕೆ ಸೇನಾ ಪತ್ಯವನು ವಿ
ಸ್ತರಿಸಲೆಳವಡಿಸಿದರು ಸುಮುಹೂರ್ತದ ಸರಾಗದಲಿ
ಪುರದೊಳಗೆ ಗುಡಿನೆಗಹಿದವು ಭೂ
ಸುರರ ವಿಮಳಾಮ್ನಾಯ ರವ ವಿ
ಸ್ತರಿಸಲಳವಡಿಸಿದರು ಮ × × ಳ ವಿಹಿತವಸ್ತುಗಳಾ ।।೩೩।।

ಸೂಳವಿಸಿದವು ಕಟಕದಲಿ ನಿ
ಸ್ಸಾರ ಕೋಟಿಗಳಳ್ಳಿರಿಯೆ ಹೆ

ಗ್ಗಾಳೆಗಳು ಸಾರಿದವು ಭಟರುಭಟಿಯು ಬಿದಿರುಗಳ
ಬಾಲಕಿಯರಾರತಿ × × ×

**ವಿ.ವಿ. :** ಅಸಮಗ್ರ, ವಿರಾಟಪರ್ವ ಪೂರ್ತಿ ಮತ್ತು ಉದ್ಯೋಗ **ಪರ್ವ**ತದ ೧೧ನೇ ಸಂಧಿಯ ೩೪ನೇ ಪದ್ಯದವರೆಗೆ ಮಾತ್ರ ಇದೆ. ಅಂತ್ಯ ಗರಿಗಳು ಇಲ್ಲ. ಕೊನೆಯ ಗರಿ ನಡು ನಡುವೆ ತ್ರುಟಿತವಾಗಿರುವುದರಿಂದ ಪ್ರತಿ ಸಾಲಿನ ಒಂದೊಂದು ಅಕ್ಷರ ಭಾಗಶಃ ಅದೃಶ್ಯ. ೮೫ನೇ ಗರಿಯಿಂದ ಬಲಬದಿಯ ಅಂಚುಗಳು ಜೀರ್ಣಾವಸ್ಥೆಯಲ್ಲಿವೆ. ೯೩ನೇ ಗರಿಯ ಕೆಲವು ಭಾಗಗಳೂ ಮುರಿದಿದೆ. ಇದೇ ಕಟ್ಟಿನಲ್ಲಿ ಕರ್ನಾಟಕ ಭಾರತ ಕಥಾ ಮಂಜರಿಯ ಇನ್ನೊಂದು ಗ್ರಂಥವಿದೆ.

ಈ ಕಟ್ಟಿನಲ್ಲಿ ಇನ್ನೂ ಮೂರು ಬಿಡಿಗರಿಗಳಿದ್ದು ಒಂದಕ್ಕೆ ಮಾತ್ರ ಪುಟಸಂಖ್ಯೆಯಿದೆ. ಇವು ಉದ್ಯೋಗಪರ್ವದ ಕಥಾಭಾಗಗಳನ್ನೊಳಗೊಂಡಿವೆ. ಆದರೆ ವಿರಾಟ ಪರ್ವಗ್ರಂಥದ ಬರಹಕ್ಕೂ ಉದ್ಯೋಗ ಪರ್ವಭಾಗದ ಗರಿಗಳ ಬರಹಕ್ಕೂ ವ್ಯತ್ಯಾಸ ವಿದೆ. ಪುಟಸಂಖ್ಯೆ ಇರುವ ಗರಿಯಲ್ಲಿ ೪೯ನೇ ಪದ್ಯದ ನಂತರ 'ಅಂತೂ ಆದ್ಯಾಯ ೧೨ಕಂ ಪದನು ೭೫ ಕಂ ಮಂಗಳಮಹಾ ಶ್ರೀಶ್ರೀ...........ವುದ್ಯೋಗಪರ್ವ ಮಂಗಳ ಮಹಾ ಶ್ರೀಶ್ರೀ ಅಂತೂ ಅಧ್ಯಾಯ ೯೯ ಪದ ೯೯೫ಕಂ ಮಂಗಳ ಮಹಾ ಶ್ರೀ....ಶ್ರೀ ರಾಮಾಯನಮಃ' ಎಂದಿದೆ. ಪುಟಸಂಖ್ಯೆಯಿಲ್ಲದ ಇನ್ನೊಂದು ಗರಿಯಲ್ಲೂ 'ಅಧ್ಯಾಯ ೧೨ ಕಂ ಪದನು ೭೫೫ ಕಂ ಮಂಗಳ ಮಹಾ ಶ್ರೀ........ ವುದೋಗ ಪರ್ವ ಸಂಪೂರ್ಣಂ' ಎಂದಿದೆ.

ಇನ್ನೊಂದು ಗರಿಯಲ್ಲಿ ಕೆಲವು ಪದ್ಯಗಳಿವೆ. ಅವುಗಳಲ್ಲಿ ಒಂದು :

ನಕುಲ ಸಹದೇವಾರ್ಜುನರ ಮಣಿ
ಮಗುಟ ಕರ್ಣಾಭರಣಪದಕಾ
ಧಿಕ ಸಮಸ್ತಾಭರಣ ಶೃಗಾರ × × ಡಿಕುಕೂಲನೆಯೊಂದರಲಿ
ನಿಕಟ ಮಾಯಾ × ಪವಂತಕರ್ಮವ
ನಕಟಬಲ್ಲರೆ ಸಾಧುಜನ ಸೇ
ವಕನು ಸೋತನು ಸೌಖ್ಯವಾವುದೊ ವಿವಿಧ ಗಣನೆಯಲಿ ॥೧೦॥

11

## ಕಾರ್ತಿಕಮಾಸ ನಕ್ತ ವ್ರತಕಲ್ಪ

| | | |
|---|---|---|
| ನಂ. ಓ/೪೬/೨ | ? | ೪೬ ಅಕ್ಷರ |
| ೩೦-೫ × ೩-೩ ಸೆಂ.ಮಿ. | ? | ೭ ಸಾಲು |
| ೧೦ + ೧ ಪತ್ರ | ಮಂತ್ರ | ಸಂಸ್ಕೃತ |

**ವಿಷಯ :** ಕಾರ್ತಿಕಮಾಸದ ರಾತ್ರಿ ಪೂಜಾ ಮಹಿಮೆ.

**ಆದಿ :** ಓಲೆಪುಟ ೧೦೨ ಸಾಲು ೩.

ಶ್ರೀ ಸಾಂಬಸದಾಶಿವಾಯನಮಃ। ಶುಭಮಸ್ತು । ದ್ವಿರಾಚಮ್ಯ ಪ್ರಾಣಾನಾಯಮ್ಯಂ । ಏವಂಗುಣೆತ್ಯಾದಿ ಶುಭತಿಥೌ । ಶ್ರೀ ಸಾಂಬಸದಾಶಿವ ಮುದ್ಧಿಶ್ಯ, ಸಾಂಬಸದಾಶಿವ ಪ್ರಸಾದ ಸಿಧ್ಯರ್ಥೆ ಸ್ಕಂದ ಪುರಾಣೋಕ್ತ ಪ್ರಕಾರೇಣ ಕಾರ್ತಿಕ ಮಾಸನಕ್ತ ವ್ರತಪೂಜಾಂಕಂಷ್ಯೆತಿ ಸಂಕಲ್ಪ್ಯ । ಓಂ ನಕ್ತವ್ರತಂ ಮಹಾದೇವ ಕರಿಷ್ಯತವಸನ್ನಿಧೌ । ಅವಿಘ್ನಂ ಕುರುಮೆದೇವ ಸಮಾಪ್ತಿಂ ತತ್ಪ್ರಸಾದತಃ । ಅರ್ಥಪೀಠಪೂಜಾ । ಓಂ ಮಹಾಮಂಡೂಕಾಯ ನಮಃ । ಓಂ ಕಾಲಿ

**ಅಂತ್ಯ :** ಓಲೆಪುಟ ೧೧೨

ನಕ್ತವ್ರತವಿಧಾನತಃ । ನಕ್ತಭೋಕ್ಷ್ಯೆ ಮಹಾದೇವ ಅರ್ಪಯಾಮಿ ಸದಾಶಿವ । ಶ್ರೀ ಸಾಂಬಸದಾಶಿವಾಯನಮಃ । ನಕ್ತಸಮರ್ಪಣಂ । ಉಥ್ಥಾಯ ಪ್ರಾರ್ಥಯೆತ್ । ಯನ್ಮಯಾಚರಿತಂ ಪಾಪಂ ಬಾಲ್ಯಯೌವನ ವಾರ್ಧಿಕೆ । ಉಪಸಂಹಾರ ಏಶ್ಯೇಶಮಾಸ ನಕ್ತ ವ್ರತಾತ್ತನ । ಕ್ಷಮ್ಯತಾಮಪರಾಧೋಮಂ ಮನೋವಾಕ್ಕಾಯ ಸಂಭವಃ । (ಹಿಂಬದಿ) ಹರಿಃ ಓಂ ತತ್ಸದಿತಿ ಶ್ರೀ ಸ್ಕಂದೆ ಪುರಾಣೆ ಕಾರ್ತೀಕ ಮಾಸ ನಕ್ತವ್ರತಕಲ್ಪ ಸಂಪೂರ್ಣಂ॥ ಶ್ರೀ ಕೃಷ್ಣಾರ್ಪಣಮಸ್ತು ॥ ಶ್ರೀ ಸಾಂಬಸದಾಶಿವಾರ್ಪಣಮಸ್ತು ॥

**ವಿ.ವಿ. :** ಸಮಗ್ರ. ಸುಲಭಗ್ರಾಹ್ಯವಾಗಿದೆ. ಇದೇ ಕಟ್ಟಿನಲ್ಲಿ ೪೬/೧ನೇ ಸಂಖ್ಯೆಯ ಕಾರ್ತಿಕ ಸೋಮವಾರ ವ್ರತಕಲ್ಪ ಗ್ರಂಥವೂ ಇದೆ. ಇದರೊಂದಿಗೆ ೪೨ನೇ ಸಂಖ್ಯೆಯ ಒಂದು ಬಿಡಿಗರಿಯಿದೆ. ಅದರ ಮಾದರಿ ಇಂತಿದೆ. (ಬದಿಯಲ್ಲಿ) ಶ್ರೀರಾಮ ಜಯಂತಿ ಕಲ್ಪಂ ।, (ಸಾಲು ೧): ಶ್ರೀರಾಮಾಯನಮಃ। ಅಗಸ್ತ್ಯೋವಾಚಾ ಸರ್ವಾನುಷ್ಠಾನ ಸಾರಂತೆ ಸರ್ವದಾನೋತ್ತಮೊತ್ತಮಂ । ರಹಸ್ಯ ಕಥಯಪ್ಯಾಯಿಸುತೀಕ್ಷಸುರಸ್ತುಮ । ಚೈತ್ರಮಾಸೆ ನವಮ್ಯಾಂತು ಜಾತೋರಾಮಃ ಸ್ವಯಂಹರಿಃ ।

## 12

## ಕಾರ್ತಿಕ ಸೋಮವಾರ ವ್ರತಕಲ್ಪ

| | | |
|---|---|---|
| ನಂ. ಓ/೪೬/೧ | ? | ೪೬ ಅಕ್ಷರ |
| ೩೦–೫×೩–೩ ಸೆಂ.ಮೀ. | ? | ೭ ಸಾಲು |
| ೭ ಪತ್ರ | ಮಂತ್ರ, ನಾಮಾವಳಿ | ಸಂಸ್ಕೃತ |

**ವಿಷಯ :** ಸೋಮವಾರದ ಮಹಿಮೆ, ಪೂಜಾಫಲವನ್ನು ಕುರಿತ ಗ್ರಂಥ.

**ಆದಿ :** ಓಲೆಪುಟ ೯೨

ಶ್ರೀರಾಮಾಯನಮಃ । ಶುಭಮಸ್ತು । ಓಂ ಸೋಮವಾರ ವ್ರತಂ ಶಂಭೋ ಕರಿಷ್ಯೆ ತವಸನ್ನಿಧೌ । ಅವಿಘ್ನಂ ಕುರುಮೆ ದೇವ ಸರ್ವಾಭೀಷ್ಟಫ× × × ×.... ಮಹೇಶ್ವರಾದೇವತಾಭ್ಯೋನಮಃ । ಓಂ ಭವಾಯನಮಃ । ಓಂ ಶಿವಾಯನಮಃ । ಓಂ ಪಶುಪತಯೆನಮಃ । ಓಂ ನೀಲಗ್ರೀವಾಯನಮಃ । ಓಂ× × × ×....

**ಅಂತ್ಯ :** ಓಲೆಪುಟ : ೧೦೩ ಸಾಲು ೩

ಓಂ 'ತತ್ಸದಿತಿ ಶ್ರೀ ಸ್ಕಾಂದ ಪುರಾಣೆ ಕಾರ್ತಿಕ ಸೋಮವಾರ ವ್ರತಕಲ್ಪ ಸಂಪೂರ್ಣಂ ॥೯೦॥ ಶ್ರೀ ರಾಮಾರ್ಪಣಮಸ್ತು ಶ್ರೀ ಸಾಂಬಸದಾಶಿವಾಯ ನಮಃ

**ವಿ.ವಿ. :** ಸಮಗ್ರ, ೯೨ನೇ ಪುಟದಿಂದ ಗ್ರಂಥ ಪ್ರಾರಂಭವಾಗಿದೆ. ೯೫,೯೯,೧೦೦ನೇ ಸಂಖ್ಯೆಯ ಗರಿಗಳಿಲ್ಲ. ಇದೇ ಕಟ್ಟಿನಲ್ಲಿ ಕಾರ್ತಿಕ ಮಾಸ ನಕ್ತವ್ರತವೂ (೪೬/೨) ಇದೆ.

## 13

## ಕಾಯ ಜೀವ ಸಂವಾದ

| | | |
|---|---|---|
| ನಂ. ಓ/೪೩/೩ | ತಿಮ್ಮಪ್ಪದಾಸ | ೧೦೪ ಅಕ್ಷರ |
| ೪೭×೩–೮ ಸೆಂ.ಮೀ. | ಕ್ರಿ.ಶ. ೧೮೬೦ | ೮ ಸಾಲು |
| ೭೮+೧ ಪತ್ರ | ಕೀರ್ತನೆಗಳು | ಕನ್ನಡ |

**ವಿಷಯ :** ದೇಹ ಮತ್ತು ಆತ್ಮಗಳ ಸಂವಾದ ರೀತಿಯ ಕೀರ್ತನೆಗಳು

**ಆದಿ :** ಓಲೆಪುಟ : ೩೯ (ಬದಿಯಲ್ಲಿ : ಕಾಯ ಜೀವ ಸಂವಾದ)

ಶ್ರೀ ವಾಸುದೇವಾಯನಮಃ ।ಕ।

ವಿರತಿಯು ಪುಟ್ಟದೆ ಸಂಸೃತಿ
ಹರೆಯುದೆನುತ್ತೊಲಿದು ಗುರುತಾ ವಾದಿಪ ನೆವದಲಿ
ಬರೆ ಭೂಸುರನಾಗಿಕಾಣದೆ
ದುರುನುಡಿಗಳ ನುಡಿದೆನದಕೆ ತೊಲಗದೆ ಮತ್ತಂ

ನಿಂಮ ನುಡಿಗಳಕೆಳಲೆನಗೆ ಹೊತ್ತಿಲ್ಲಿಯುದು
ನಂಮ ಗೃಹಕೃತ್ಯಗಳು ಬಹಳವಾಗಿಹವು

ನಂಮ್ಮೈಯ್ಯನೊಂದು ಗ್ರಾಮವನೆಕಸ್ವಾಮ್ಯದಲಿ
ತಂಮ ದಂಪತಿಗಳುಪಭೋಗಕೆಂದೂ
ತಂಮಲ್ಲಿ ತಾವೆ ಸಂಪಾದಿಸಿದರವರಲ್ಲ
ಹಂಮುಕಡೆಯೂದಪುದೀ ಮೂವರುದಿಸಿದರೂ ॥೧॥

**ಅಂತ್ಯ** : ಓಲೆಪುಟ (ತ್ರುಟಿತ) ಸಾಲು : ೩
× × × ದಿರಲೆ ಮನವೆ ಜೀವನ ಬೆದರಿಕೆಯನು ಕಳಿ ।
ವದಗಿಕೊಳ್ವವಿಸಾಧನಗಳಸವಸಿದೆಯದೆ ಬಿಡುವೆನೆ ನಿನೆಂಮೊಳನಿರೆ॥ಪಲ್ಲ॥

ಶಮೆದಮೆಗಳುತಾವೂ ಬರದಿರೆ ಕ್ಷಮೆಯನು ಕರಕೊಂಡು ।
ಕಮ × × × ....
[ಸು]ಮತಿದೊರು ವಿರತಿಗಳಾ ಕೂಡಣ ಮಮತೆಯ ಬಿಡು ನೀನು ।
ಕುಮತಿಯಕರೆ ವಿಷಯಂಗಳ ಬೀಡಿನೊಳ್ ಕ್ರಮದಿಂದಿರು ನಿಲ್ಲದಿರುವಂದೆಡೆಯಲಿ ॥೧॥

**ವಿ.ವಿ.** : ಸಮಗ್ರ ; ಅಕ್ಷರ ಸ್ಫುಟವಾಗಿ ಓದಲು ಸುಲಭವಾಗಿದೆ. ಕೊನೆಯ ಗರಿಯ ಎರಡೂ ತುದಿಗಳ ಬಹು ಭಾಗ ಮುರಿದಿದೆ. ಈ ಗರಿಯ ಹಿಂಭಾಗದಲ್ಲಿ ಅರ್ಧ ಭಾಗ ಮಾತ್ರ ಬರವಣಿಗೆಯಿದೆ. ಇದರೊಂದಿಗೆ ಒಂದು ಬಿಡಿಗರಿಯೂ ಇದ್ದು ಎರಡೂ ಭಾಗ ದಲ್ಲಿ ಅರ್ಧ ಮಾತ್ರ ಬರವಣಿಗೆಯಿದ್ದು ಸುಮಾರು ಮೂರು ಕೀರ್ತನೆಗಳಿವೆ. ಈ ಕೀರ್ತನೆ ಅಂಕಿತವೂ 'ವೆಂಕಟೇಶ', ತಿರೇಪತೀಶ' ಎಂದಿರುವುದಲ್ಲದೆ, ಚಿಕ್ಕನಾಗಪುರದಿ ಜ್ಞಾನ ಸುಧೆಯನೆರೆದ ಜ್ಞರರಕ್ಷಿಸಲ್ವೆಂಕಟೇಶನು ಗುರುವಾಸುದೆವಾರ್ಯನಾಗಿರುವನೆಂದರಿತು ತಚ್ಚರಣಸೆವೆಗೆ ಮನವೆರೆಗುವಂತಾಯಿತೆನಗೆ ॥ ಎಂಬ ಸಾಲೂ ಇರುವುದರಿಂದ ಇವೂ ಸಹ ತಿಮ್ಮಪ್ಪದಾಸರ ರಚನೆಗಳೇ ಆಗಿರುತ್ತವೆ. ಕೀರ್ತನೆಗಳ ಮೊದಲ ಚರಣ ಗಳು ;

೧. ಭಲರೆ ದಯಾನಿಧಿಯೊಲವೆಮಗೊದಗಿದುದಳುಕದಿರೆಲೆ ಮನವೆ ।
೨, ಗುರುಪದಯುಗ ಸುಖಗಾಣಿಸಿತು ।
೩. ಅಂಮಂಮಾ ಗುರುಮಹಿಮೆ ಅತ್ಯದ್ಭುತವು ।
೪. ನಿಂತಭಾವದ ಬಗೆಯನೆಂತು ಬಂಣಿಸೆನು ।
೫. ಕಾಲ ಜ್ಞಾನಿಗಳೈವರಿಹರು । ಅವರೂಳಿಗಕ್ಕೈವರು ಕಾದುಕೊಂಡಿಹರು.
(ಇದು ೨ನೇ ನುಡಿಯ ಮೊದಲ ಚರಣ)

ಇದೇ ಕಟ್ಟಿನಲ್ಲಿ 'ಕೃಷ್ಣಷ್ಟೋತ್ತರ ಶತನಾಮವರ್ಾಕ್ಪುಷ್ಪಪೂಜಾಕೀರ್ತನೆಗಳು' ಮತ್ತು 'ಉದಯರಾಗ' ಕೀರ್ತನೇಗಳ ಗ್ರಂಥಗಳೂ ಇವೆ.

## 14

### ಕೀರ್ತನೆಗಳು

| | | |
|---|---|---|
| ನಂ. ಓ/೬೧/೩ | ತಿಮ್ಮಪ್ಪದಾಸ | ೮೪ ಅಕ್ಷರ |
| ೩೬–೫ × ೩–೫ ಸೆಂ.ಮಿ. | ಕ್ರಿ.ಶ. ೧೮೬೦ | ೭ ಸಾಲು |
| ೫ ಪತ್ರ | ಕೀರ್ತನೆಗಳು | ಕನ್ನಡ, ಸಂಸ್ಕೃತ |

**ವಿಷಯ :** ಗುರುಸ್ತುತಿ

**ಆದಿ :** ಓಲೆಪುಟ ೧೩

ರಾಗ ॥ ಶಂಕರಾಭರಣ ॥ ಆದಿತಾಳ ॥
ವಂದೆ ಗೋವಿಂದರಾಜಂ । ಸದಾ । ವನತಸುರಹರಾಜಂ । ಅವಿರತ ।

ಮಂದಿರಾ ಸುಮಂದಿರಾಯ ತೋರಸ್ಕಂಧರಾರ್ಥನಂದರಾರಿರಾಜಂ ॥ಪಲ್ಲ॥
ಬಾಧಿತಾರ್ತಜನ ಶೋಕಂ । ಗುರುಭವಹಾರಿಪುಣ್ಯಶ್ಲೋಕಂ ॥

ಸಂತತಾಧೆಯಸಕಲ ಲೋಕಂ ಪದ್ಮದರುಶಮಣಿವಿವೇಕಂ ।
ಸ್ವಪದಾರಾಧಕಾಳಿ ಬೋಧಕಾರಿದುರಿ ತಾನ್ಮದಕಾರಣಾಧಿಕಾವಲೋಕಂ ॥೧॥

**ಅಂತ್ಯ :** ಓಲೆಪುಟ ೧೨

ಶ್ರೀ ರಾಮಾಯ ನಮಃ । ಶುಭಮಸ್ತು । ನಿರ್ವಿಘ್ನಮಸ್ತು ।
ಶ್ರೀ ಮತ್ಸದ್ಗುರುವಾಸುದೇವಾರ್ಯ ನಮಃ । ಶ್ರೀ ವೆಂಕಟೇಶಾಯ ನಮಃ ॥

ಗುರುಬ್ರಹ್ಮ ಗುರುರ್ವಿಷ್ಣು ಗುರುವೆ ಪರಮೇಶ್ವರಃ ।
ಗುರುಃ ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀ ಗುರುವೆ ನಮಃ ॥

ನಮಸ್ತೆ ಶಾರದಾ ದೇವಿ ಕಾಶ್ಮೀರ ಪುರವಾಸಿನೀ
ತ್ವಾಮಹಂ ಪ್ರಾರ್ಥಯೆದೇವಿ ವಿದ್ಯಾದಾನಂ ಚ ದೇಹಿಯೆ ॥

**ವಿ.ವಿ. :** ಬಿಡಿಗರಿಗಳು. ಮೇಲಿನ ಎರಡು ಗರಿಗಳನ್ನು ಬಿಟ್ಟು ಉಳಿದವು ಪ್ರಯೋಗ ಗರಿಗಳು. ಶ್ರೀ ರಾಮಾಯ ನಮಃ ಇತ್ಯಾದಿಗಳನ್ನು, ನಾಗರಿಲಿಪಿಗಳನ್ನು, ಕಲಿಕೆಗಾಗಿ ಬರೆಯಲಾಗಿದೆ. ಅಂತ್ಯ ಗರಿಯಲ್ಲಿ ಮೇಲಿನ ಶ್ಲೋಕಗಳನ್ನು ಬಿಟ್ಟರೆ ಉಳಿದಂತೆ ಖಾಲಿ ಇದೆ. ಆದಿಗರಿಯಲ್ಲಿ ನಾಲ್ಕು ಕೀರ್ತನಗಳಿವೆ. ಒಂದು ತೆಲುಗು ಕೀರ್ತನೆಯೂ ಇದೆ. ಹ.ಪ್ರ. ಸಂಖ್ಯೆ ೬೧/೧, ೧೧/೨, ೧೫, ೧೮, ೨೮, ೨೯, ೩೨, ೩೪, ೫೭ ಮತ್ತು ೫೯ರಲ್ಲೂ ಕೀರ್ತನೆಗಳಿವೆ.

## 15

## ಕೀರ್ತನೆಗಳು

| | | |
|---|---|---|
| ನಂ. ಓ/೬೧/೩ | ತಿಮ್ಮಪ್ಪದಾಸ | ೯೮ ಅಕ್ಷರ |
| ೩೬–೫ × ೩–೫ ಸೆಂ.ಮಿ. | ಸು. ಕ್ರಿ.ಶ. ೧೮೬೦ | ೭ ಸಾಲು |
| ೫ ಪತ್ರ | ಕೀರ್ತನೆಗಳು | ಕನ್ನಡ |

**ವಿಷಯ :** ಬಿಡಿ ಕೀರ್ತನೆಗಳು

**ಆದಿ :** ಓಲೆಪುಟ ೧ ;

ಶ್ರೀ ರಾಮಾಯನಮಃ ॥ರಾಗಾ॥ ಕಾಂಬೋದಿ॥

ಭವಭವದಿ ನೆನನೆನದು ಕಂಣೆದಿರೆ ಕಂಡೆನೌ ಶಿವಕಾಮವಲ್ಲಿ ನಿಂನಾ ॥
ಕವಿದ ತಮವಳಿಯುತೌ । ಕಾಯ್ಯ ಕೈಗೂಡಿತೌ । ಸುವಿವೇಕವಿತ್ತು ಕಾಯೆ
ತಾಯೆ ॥ಪಲ್ಲ॥
ಬಾಲೆ ಪಂಚದಶಾರ್ಣ ಮೂಲಮಂತ್ರಾಕ್ಷರಿಯ ಶ್ರೀಲೋಲೆ ಹ್ರೀವಿಶಾಲೆ
ಪಾಲಲೋಚನೆ ಪಂಡಿತಾರಾಧ್ಯೆ ಪ್ರಣವಾನುಕೂಲೆ
ನೀಲವೇಣಿ ಶುಭಾಂಗಿ ನಿಜಭಕ್ತಪಾಲನಸುಶೀಲೆ ಶಿವೆ ಸುಗುಣಜಾಲೆ
ಕಾಲಕಾಲಾರ್ದಾಂಗಿ ಚಂದ್ರಶೇಖರ ನರ್ತನಾಲೋಕನಾಮಲೀಲೆ ॥ದೇವಿ॥
॥೧॥

**ಅಂತ್ಯ** ; ಓಲೆಪುಟ ೫ (ಹಿಂಭಾಗ) ರಾಗಾ॥ ನಾಟಿ॥
ಆರಕ್ಕರದ ಶಿವನೆಯಾರಕ್ಕರದ ಶಿವೆಯೆ ।
ತೋರಬೇಕೆನಗೆ ನಿಂಮಯ ನಿಜವನೊಲಿದು ॥ಪ॥

ಭವನೊ ಭಗವಂತನ ಭರ್ಗನೊ ಭಜಿಸುವರ ಭವವನಿಲಿಸುವನೊ
ಭವಭವಾಂತರದ ಸಂಭವಿಸಿದ ಘವಳಿವವನೊ
ಭವಸಿಂದುತಾರಭಯ ನಿವಾರಕನೊ ॥೧॥

**ವಿ.ವಿ. :** ಅಸಮಗ್ರ ; ಬಿಡಿ ಕೀರ್ತನೆಗಳು, ಗುರುವಾಸುದೇವಾರ್ಯ ಉಲ್ಲೇಖ, ತಿರುಪತಿ ವೆಂಕಟೇಶ ಅಂಕಿತ ಇವೆ. ೩ನೇ ಗರಿಯ ಎರಡೂ ಭಾಗದಲ್ಲಿ ನಾಲ್ಕು ನಾಲ್ಕು ಸಾಲುಗಳು ಮಾತ್ರ ಇವೆ. ೪ನೇಗರಿಯ ಬಲಭಾಗ ಸ್ವಲ್ಪ ಮುರಿದಿದೆ. ಹ.ಪ್ರ. ಸಂ ; ೬೧/೩, ೧೧/೨,೧೫,೧೮,೨೮,೨೯,೩೨,೩೪,೫೭,೫೯ ರಲ್ಲೂ ಕೀರ್ತನೇಗಳಿವೆ.

16

**ಕೀರ್ತನೆಗಳು**

| | | |
|---|---|---|
| ನಂ. ಓ/೧೧/೨ | ತಿಮ್ಮಪ್ಪದಾಸರು | ೬೩ ಅಕ್ಷರ |
| ೩೮–೪ × ೩–೪ ಸೆಂ.ಮಿ. | ಸು. ಕ್ರಿ.ಶ. ೧೮೬೦ | ೬ ಸಾಲು |
| ೩೫ ಪತ್ರ | ಕೀರ್ತನೆಗಳು | ಕನ್ನಡ, ತೆಲುಗು |

**ವಿಷಯ :** ಬಿಡಿ ಕೀರ್ತನೆಗಳು

**ಆದಿ :** ಓಲೆಪುಟ ೧.

ಶ್ರೀ ಗುರುಭ್ಯೋ ನಮಃ ॥ಶ್ಲೋ॥ ಸಾಂಗೋಪಾಂಗ ತರಂಗ ನಾಗತನದಾಲಿಂಗ ದ್ವಿಹೃದ್ಯಂಗದಾಯಂಗೋಪಾಯತಿವೆದವೆೌ × ರಸಿಶಂಗೊ × ಂಸ್ವಿದಂವಸ್ತಿತಿ । ನಂಗೊ ಪಾನಕ ಮಂಗಳ ಪ್ರದವಿದುಶ್ರ್ಯಂಗಾರ ಲಿಂಗಾಂಬುಜಂತಂ ಗೊಪಾಲಯತೀಂದ್ರಮಿಂ ಗಿತವಿದು ತುಂಗಂ ಭಜೆ ಸರ್ವದಾ॥

ರಾಗಾ॥ ನಾಟಿ। ಜಂಪೆತಾಳ॥

ಜಯ ಜಯ॥ ಜಯ ಜಯ ಶಮಾದಿಗುಣ।
ಜಯ ಸತ್ವಥಾಚರಣ । ಜಯ ವಿರಾಗ ವಿಶೆಷ
ಜಯ ಪುಣ್ಯಭಾಷಾ । ಜಯ ಜಯ ಜನಾನಂದ ।
ಜಯವಿನುತ ಮುನಿವೃಂದ ಜಯ ದಿವ್ಯಗುಣಸಾಂದ್ರ ಜಯದೆಶಿಕೆಂದ್ರಾ ॥೧॥

ಜಯ ಜಯ ಶುಭಾಚಾರ । ಜಯ ಸಚ್ಚಿದಾಕಾರ ।
ಜಯ ಪದ್ಮ ಸಮಾಚರಣ । ಜಯ ದುರಿತ ಹರಣ ।
ಜಯ ಜಯ ಗಳಿತ ಮಾಯು । ಜಯ ಸಜ್ಜನ ವಿಧೆಯ ।
ಜಯ ವೆದತತಿವಿನುತ । ಜಯ ಪಾಪರಹಿತಾ ॥೨॥

**ಅಂತ್ಯ ;** ಓಲೆಪುಟ ೨೧, ಹಿಂಭಾಗ, ಸಾಲು ೫ ರಾಗ ॥ ॥

ಮರೆಯದೆ ಭಾವಗೋಚರವಾಯಿತ್ತೈಯ್ಯ ॥
ಕರುಣ ವೆಂಕಟದಾಸವರ್ಯ ಸದ್ಗುರುವೆ ॥

ಸಂನಿಕರ್ಷವನಾದ ರಣ ಹೇತುಮಾನವರಿ ।
ಗೆಂನುತಾನಂದರಸ ರುಚಿದೋರಿಸಿ ।
ನಂನನೆತೊಳಲಿ ಬಳಲುತ ನಿಂನೊಳಿರಗುವಂ ।
ತುಂನತರ ಮಾಡಲಂತರ್ಧಾನವಡೆದೆ ॥ ॥೧॥

ಗೋಪಿನಾರಿಯರಿಗಾನಂದರೂಪವ ತೋರಿ ।

**ವಿ.ವಿ. :** ಅಸಮಗ್ರ ; ಲಿಪಿ ಸುಂದರ, ಸ್ಫುಟವಾಗಿದೆ. ಪುಟ ಸಂಖ್ಯೆಯ ಮೇಲೆ, ಕೆಳಗೆ ಚಿತ್ರ ಬಿಡಿಸಲಾಗಿದೆ. ಬಲ ಬದಿಯಲ್ಲಿ ಕೀರ್ತನೆಗಳ ಸಂಖ್ಯೆಯನ್ನು ಕೊಡಲಾಗಿದೆ. ೨೦, ೨೧ನೇ ಗರಿಗಳಲ್ಲಿ ಈ ಚಿತ್ರಗಳಾಗಲಿ ಕೀರ್ತನೆ ಸಂಖ್ಯೆಗಳಾಗಲಿ ಇಲ್ಲ. ಇದೇ ಕಟ್ಟಿನಲ್ಲಿ ೧೧/೧ನೇ ಸಂಖ್ಯೆಯ 'ಋಣಕೀರ್ತನೇಗಳು' ಎಂಬ ಗ್ರಂಥವಿದೆ. ಈ ಗ್ರಂಥದಲ್ಲಿ ಗೋಪಾಲಾರ್ಯರ ಉಲ್ಲೇಖದ ಕೀರ್ತನೆಗಳು ತೆಲುಗು ಬಾಷೆಯಲ್ಲಿವೆ. ಹ. ಪ್ರ.ಸಂ. ೬೧/೩,೬೧/೨,೧೫.೧೮,೨೮,೨೯,೩೨,೩೪,೫೭,೫೯ಗಳಲ್ಲೂ ಕೀರ್ತನೆಗಳಿವೆ.

17

## ಕೀರ್ತನೆಗಳು

| | | |
|---|---|---|
| ನಂ. ಓ/೧೫ | ತಿಮ್ಮಪ್ಪದಾಸರು | ೫೯ ಅಕ್ಷರ |
| ೩೮×೩–೬ ಸೆಂ.ಮೀ | ಸು. ಕ್ರಿ.ಶ. ೧೮೬೦ | ೬ ಸಾಲು |
| ೯ ಪತ್ರ | ಕೀರ್ತನೆ | ಕನ್ನಡ |

**ವಿಷಯ :** ದೇವತಾಸ್ತುತಿ

**ಆದಿ :** ಓಲೆಪುಟ ೧

ಶ್ರೀ ಗಣಾದಿಪತಯೆ ನಮ಼
ಕೊಡು ಮತಿಯ ಗಣನಾಥ ಪೊಡಮಡುವೆ ನಿಂನಡಿಗೆ ।
ಜಡಮತಿಯ ಕಡೆಗೊಳಿಸಿ ಮೃಡತನಯ ಸಲಹು ।
ಮೃಡನೆನಲು ಸುಖರೂಪನೊಡನಿಪ್ಪ ಮತಿಮೃಡನು ।
ಜಡತಾನು ಕಲ್ಪಿತವು ಬಿಡಿಸಿದನು ನೀನೂ ॥ಪಲ್ಲ॥

ಮೃಡತನಯನೆಂಬೆರೆಡು ಶಬ್ದದರ್ಥವನೊಡೆ
ಯಡೆಬಿಡದ ಸುಖರೂಪನೆಂಬರ್ಥವಿಹುದೂ ॥
ವಡಲು ಮೃಡನಿಗೆ ನೀನು ಕಡೆಗೆ ಮೃಡ ನೀನಾದೆ ।
ನಡುವೆ ಜಡನಾದೆನ್ನ ಮೃಡನ ಮಾಡೈಯಾ ॥೧॥

**ಅಂತ್ಯ :** ಓಲೆಪುಟ ೬

...............ತ್ರಿಗುಣವೆಂಬ ಮಡಿಯುಟ್ಟು ।
ಪದಗಿ ಶಮೆದಮೆಯೆಂಬ ನಿತ್ಯಕರ್ಮವ ಮಾಡಿ ।
ಮುದದಿಂದ ಮಾತ್ಮನಿಹ ಮಂದಿರಕೆ ಬಂದು

ಪ್ರಣವ ಮಂಟಪದಲ್ಲಿ ಕನಕಮಯ ಪೀಠವನು ತನು ಕ
ರಣ ಮನಃ ಪ್ರಕೃತಿಯೆಂಬನಳನೂ ।
ಅನುಕೂಲದಿಂ ರಚಿಸಿ ಸಚ್ಚಿದಾನಂದನನು
ಮನದಲ್ಲಿ ಧ್ಯಾನವನು ಬಳಿಕೀಗ ಮಾಡುವೆನೂ ॥

**ವಿ.ವಿ :** ಅಸಮಗ್ರ ; ಮಸಿಲೇಪನವಿರುವುದಿಲ್ಲ. ಹಲವಾರು ಪತ್ರಗಳಲ್ಲಿ– "ಕನಕ ಮಯವಾದ ಶ್ರೀ ತಿರುಪತಿಯ ವೇಂಕಟನ । ತನುರೂಪ ನೀಲಕಂಠಾರ್ಯರನುದಿನ

ಬಿಡದೆ" ಹಾಗೂ "ನರಹರಿರಾಯ ಶ್ರೀಕೃಷ್ಣ ರಾಮಕೃಷ್ಣಾರ್ಯ ತಿರುಪತಿ ವೆಂಕಟರಮಣನಿಗೆ" "ಕಾವೆರಿ ಗಂಗೆಯಲಿ ಕಮಲನಾಭನ ಕಥೆಯ । ಪಾವನ ತೀರ್ಥದಲ್ಲಿ ಪಾಪವಳಿದೂ" ಇತ್ಯಾದಿ ಉಲ್ಲೇಖಗಳಿವೆ. ಓಲೆಗಳಿಗೆ ಸಂಖ್ಯೆ ಇಲ್ಲ (ಅನುಕೂಲಕ್ಕಾಗಿ ಹಾಕಿಕೊಂಡಿದೆ–ಸಂ) ಹ.ಪ್ರ,ಸಂಖ್ಯೆ ೬೧/೩, ೬೧/೨, ೧೧/೨, ೧೮, ೨೮, ೨೯, ೩೨, ೩೪, ೫೭ ಮತ್ತು ೫೯ ಗಳಲ್ಲೂ ಕೀರ್ತನೆಗಳಿವೆ.

## 18

### ಕೀರ್ತನೆಗಳು

| | | |
|---|---|---|
| ನಂ. ಓ/೧೮ | ತಿಮ್ಮಪ್ಪದಾಸ | ೮೮ ಅಕ್ಷರ |
| ೩೮–೪ × ೩–೬ ಸೆಂ.ಮಿ. | ಕ್ರಿ.ಶ. ಸು. ೧೮೬೦ | ೫ ಸಾಲು |
| ೩ ಪತ್ರ | ಕೀರ್ತನೆ | ಕನ್ನಡ |

**ವಿಷಯ** ; ಗುರು ಮತ್ತು ದೇವತಾಸ್ತುತಿ

**ಮಾದರಿ** : ಓಲೆಪುಟ ೧

ರಾಗಾ–॥ ॥

ಗುರುವೆ ಪರಬ್ರಹ್ಮ
ವಾಸುದೇವಾರ್ಯ ಗುರುವೆ ಪರಬ್ರಹ್ಮ ॥ಪಲ್ಲ॥

ಸುಖಬುದ್ಧಿಯಿಂ ಪಾಪಾ ಸಕತಮಾನ ನರನು
ಯುಕುತಿಯಿಂದಲಿ ಹರಿಭಕತಿಗಳವ ಮಾ × ॥೧॥

ಭಾಗವತಾರ್ಥದಿ ರಾಗವ ಪುಟ್ಟಿಸಿ ।
ಹಾಗೆ ಗೀತಾಮೃತಸಾಗರದೆಡೆಗೊಯ್ವ ॥೨॥

ನಾನಾಮತಗಳೊಳು ಮಾನವ ಹೊಗದಂತೆ
ಶ್ರೀನಿವಾಸನ ಪಾದಧ್ಯಾನವ ಬಲಿಸುವ ॥೩॥

ಕಾಮಾದಿ ಕಲುಷಿತ ತಾಮಸ ಜನರನು
ಪ್ರೇಮದಿಂದಲಿ ನವಭೂಮಿತೆಗೆರಿವ ॥೪॥

**ವಿ.ವಿ** : ಅಸಮಗ್ರ ; ಬಿಡಿಗರಿಗಳು. ಒಟ್ಟು ಐದು ಕೀರ್ತನೇಗಳಿವೆ. ಪುಟಸಂಖ್ಯೆ ಇಲ್ಲ. ಕೀರ್ತನೇಗಳ ಅಕಾರಾದಿ ಹೀಗಿದೆ :

೧. ಗುರುವೆಪರಬ್ರಹ್ಮ ವಾಸುದೇವಾರ್ಯಗುರುವೆ ಪರಬ್ರಹ್ಮ ।
೨. ತಾ ಕಾಯುತಿದ್ದ ಕೃಷ್ಣನು ಗೋಪಾಲರಂನೂ । ಗೋಕುಲ ಗೂಢನು
೩. ನೋಡಿ ನಿಂನ್ನನು ಧನ್ಯಳಾದೆನು ಮಾಡಿ ಕೃಪೆಯನು ಮನ್ನಿಸು ।
೪. ರಂಗನಾಯಕ ನಿಂನ್ನ ಮಂಗಳಾಕೃತಿ ಕಂಡು ಹಿಂಗಿದುದು ಭವಭಂಗಲು ।
೫. ಮರೆಯೊಕ್ಕೆ ನಿಂನ್ನನು ಮರುಗಿ ರಕ್ಷಿಸಬೇಕು ಶಂಕರೇಶಾ ।

೫ನೇ ಕೀರ್ತನೆಯಲ್ಲಿ 'ಚರಣಸೇವಕ ತಿಂಮದಾಸ" ಎಂಬ ಕೃತಿಕಾರನಾಮ ನಿರ್ದೇಶನವಿದೆ. ಹ. ಪ್ರ. ಸಂಖ್ಯೆ ; ೬೩/೩, ೬೧/೨, ೧/೨, ೧೫, ೨೮, ೨೯, ೩೨, ೩೪, ೫೭, ೫೯ ಗಳಲ್ಲೂ ಕೀರ್ತನೆಗಳಿವೆ.

## 19

### ಕೀರ್ತನೆಗಳು

| | | |
|---|---|---|
| ನಂ. ೬/೩೮ | ತಿಮ್ಮಪ್ಪದಾಸ | ೭೨ ಅಕ್ಷರ |
| ೪೧–೫ × ೩–೬ ಸೆಂ.ಮಿ. | ಕ್ರಿ.ಶ. ೧೮೬೦ | ೭ ಸಾಲು |
| ೩ ಪತ್ರ | ಕೀರ್ತನೆ | ಕನ್ನಡ |

**ವಿಷಯ** ; ಪೂಜಾವಿಧಾನ ಕೀರ್ತನೆಗಳು

**ಆದಿ** ; ಓಲೆಪುಟ ೪೩

ಶ್ರೀ ಗುರುಭ್ಯೋ ನಮಃ ॥ರಾಗಾ॥

ಸಾಸಿರನಾಮ ಪೂಜೆಯ ಸಮಯಾ ।
ಶ್ರೀ ಮದ್ವಾಸುದೇವನೆ ರಕ್ಷಿಪ ಸಮಯಾ । ಸ್ವಾಮಿ ॥ಪಲ್ಲ॥

ಸಾಸಿರದಳ ಪದ್ಮ ಮಧ್ಯದಿ ಶ್ರೀವೆದ
ವ್ಯಾಸಗುರುವು ಕುಳಿತಿಹ ಸಮಯಾ
ಭಾಸುರವಾದರೆ ಸುಮುಖ ಮಂಡಲ ದಿವ್ಯ
ಕಾಶಿಸೆ ಮಂತ್ರಪಸ್ಥಿವಸಮಯಾ ಸ್ವಾಮಿ ॥೧॥

ಶ್ರೀರಮಣಿಯು ಸಹ ಹೃದಯಮಧ್ಯದಿ ಶ್ರೀಮ

ನ್ನಾರಾಯಣ ನೀನಿಹ ಸಮಯಾ
ತೊರುತಿದಿರೆ ಪೀಠದಿ ಪೂಜೆಗೊಳುತೆಂನ
ಸ್ಥಿರ ಮುಖದಿ ನೋಡುವ ಸಮಯಾ ॥ಸ್ವಾಮಿ॥ ॥೨॥

**ಅಂತ್ಯ :** ಓಲೆಪುಟ ೪೪

ಜಯ ಜಯ ವೆಂಕಟನಾಯಕ ಜಯ ಜಯ ಜಯ ಜಯ
ಲಕ್ಷ್ಮೀರಮಣ ಜಯ॥
ಭಯ ಪರಿಹರ ಶರಭನಾಮಧೆಯ ಜಯ ಜಯ × × ವಿಭವ
ಪ್ರದಚರಿತ ಜಯಾ ॥ಪಲ್ಲ॥
ಜಯ ಜಯ ಕೆಶವ ನಾರಾಯಣ ಜಯ ಜಯ ಮಾಧವ ಗೊವಿಂದ ಜಯ
ಜಯ ವಿಷ್ಣು ಮಧುಸೂದನ ತ್ರಿವಿಕ್ರಮ ಜಯ
ವಾಮನ ಜಯ ಶ್ರಿಧರ ಜಯ ॥೧॥
ಜಯ ಜಯ ಹೃಷೀಕೆಶ ಪದ್ಮನಾಭ ಜಯ ಜಯ
ದಾಮೊದರ ಸಂಕರ್ಷಣ ಜಯ ।
ಜಯ ವಾಸುದೆವಜ ಪ್ರದ್ಯುಮ್ನ ಜಯಾನಿರುದ್ಧ
ಪುರುಷೊತ್ತಮ ಜಯಾ ॥೨॥
ಜಯ ಜಯಾಧೊಕ್ಷಜ ನಾರಸಿಂಹ ಜಯ ಜಯ
ಜಯಚ್ಯುತ ಜಯ ಜನಾರ್ದನ
ಜಯ ಜಯೊ (ಪಿ) ಐಂದ್ರಜಯ ಹರೆ ಶ್ರೀ ಕೃಷ್ಣ ಜಯ
ಜಯ ತಿರುಪತಿ ನಿಲಯ ಜಯಾ ॥೩॥

**ವಿ.ವಿ :** ಅಸಮಗ್ರ ; ಒಟ್ಟು ನಾಲ್ಕು ಕೀರ್ತನೆಗಳಿವೆ. ರಾಗ ಸೂಚನೆಯ ಮುಂದೆ ಸ್ಥಳ ಬಿಟ್ಟಿದೆ. ಗರಿಗಳಿಗೆ ೪೩,೪೪ ಎಂದು ಸಂಖ್ಯೆಯಿದೆ. ಹಸ್ತ ಪ್ರತಿ ಸಂಖ್ಯೆ ೬೧/೩, ೬೧/೨, ೧೧/೨, ೧೫, ೧೮, ೨೦,೩೨, ೩೪, ೫೭, ೫೯ರಲ್ಲೂ ಕೀರ್ತನೆಗಳಿವೆ.

## 20

### ಕೀರ್ತನೆಗಳು

| | | |
|---|---|---|
| ನಂ : ೬/೨೯ | ತಿಮ್ಮಪ್ಪದಾಸ | ೮೭ ಅಕ್ಷರ |
| ೩೩–೭ × ೪ ಸೆಂ.ಮಿ | ಕ್ರಿ.ಶ. ಸು. ೧೮೬೦ | ೮ ಸಾಲು |
| ೭ ಪತ್ರ | ಕೀರ್ತನೆ | ಕನ್ನಡ |

**ವಿಷಯ :** ಗುರು ಮತ್ತು ದೇವತಾ ಸ್ತುತಿಗಳು.

**ಆದಿ :** ಓಲೆಪುಟ ೧

ರಾಗಾ॥ ರಾಮ ಪರಾಕು ಪರಾಕು ಯಂಬ ವರ್ಣ ॥

ವಲ್ಲದಿದ್ದರೆ ವಾಸಿಯಾಯ್ತು ॥ಮನವೆ।
ಕೊಲ್ಲುವಗಲ್ಲದೆ ಕೊಡೆವಳವ ಸೊತು ॥ವಲ್ಲ॥

ಮರೆಯೊಕ್ಕ ಗುರುವಂನು ಮರತು ಸಂಶಯುವಂನು ।
ಚರಣದೂಳಿಗವಂನು ಚೆಂನಾಗಿ ಮಾಡಿಂನು ।
ಹರಿಯ ಸ್ಮರಣೆಯಂನು ಹಾಡಿ ಹಿಗ್ಗುತ ನೀನು ।
ಪರಮ ಪದವಿಯಂನು ಪಡೆಯೆಂದು ಪೆಳ್ವೆನು ॥೧॥

ತರುಣಿ ಸುತರು ದ್ರವ್ಯ ತುರು ಮನವಾರ್ತೆಯು ।
ನರ ರ್‍ರಿಬಲೆಯೊಳು ಬಿದ್ದು ಹಲುಗಿರಿವದ ನೊಡಿ ।
ಪರಮ ವೈರಾಗ್ಯ ಖಡ್ಗದಿ ಮೊಹಪಾಶವ
ಪರಿದು ಜ್ಞಾನಾಮೃತ ಪಾನಗ್ಯೆಯೆಂದೆನು ॥೨॥

**ಅಂತ್ಯ :** ಓಲೆಪುಟ ೩ (ಹಿಂಬಾಗ) ಸಾಲು ೭ ಮತ್ತು ೮.

ರುಣ ಕರ್ತೃ ಪಿತೃ ಶತ್ರು ಧನ ಕರ್ತೃ ಪಿತೃ ಸಖಿ
ಯೆನುವ ಗ್ರಂಥಾರ್ಥಗಳನು ಕೆಳಿಯೂ ।
ಗಣೆನಾದೆನನುತಕೊರ್‍ಗರಗಿದಕ್ತಿಯು ಕೆಟ್ಟು
ತೃಣಕಿಂತ ಕಡೆಯಾಗಿ ತಬ್ಬಿಬ್ಬನಾಡುತ್ತ ॥೬॥

ಸಾಲವ ಕೊಟ್ಟವ ಸಾರಿಗೆ ಸಾರಿಗೆ
ಕೆಳಿದರವನಿಗೆ ಕದ್ದೊಡು ತಾ
ಬಳುವೆ ಮರಣದ ಬಾಯುಲಾಡುತ ಬುದ್ಧಿ ।
ಜಾಲಾಡುವಂದದಿ ಜಡಿದು ಹೆದರಿಸುತ ॥೭॥

**ವಿ.ವಿ :** ಅಸಮಗ್ರ ; ಲಿಪಿ ಸ್ಫುಟವಾಗಿದೆ. "ಚಿಕನಾಗಪುರವಾಸ' 'ವಾಸುದೇವಾರ್ಯಗುರು' ಇತ್ಯಾದಿ ಉಲ್ಲೇಖಗಳಿವೆ. ಈ ಗ್ರಂಥದಲ್ಲಿ ೭ಕೀರ್ತನೆಗಳಿವೆ. ಅವುಗಳ ಮೊದಲ ಸಾಲು ಹೀಗಿವೆ.

೧. ವಲ್ಲದಿದ್ದರೆ ವಾಸಿಯಯ್ತು
೨. ಯಿಂಥು ನಾನೇನು ಸುಕೃತವಮಾಡಿದೆಸೋ ಯಂಬ ವರ್ನ
ಮೊರೆಯುಲಾಲಿಸಬೇಕು ಮರುಗಿ ದಂಮ್ಯೆಯ್ಯ

೩. ಮರುಗದೆ ನಿಂತಿಹುದೆ ಮನವು ನಿಂನ

೪. ನಿನಗೆನಗೆ ಸಂಬಂಧ ಯಂಬ ವರ್ಗ ಬೇಡಿಕೊಂಬೆ ಸಲಹುಬಾಕರದೆನ್ನ

೫. ರೃಣವ ಮಾಡಿದ ಪಾಪ ರುಜುವಾಗಲೀ

೬. ಸಮಯದಲ್ಲಿ ಸುಂಮನಿರುವರೇ ರಾಮ

೭. ರೃಣವ ಮಾಡಿದ ಪತಿತನು ನಾನು

ಹಸ್ತಪ್ರತಿ ಸಂಖ್ಯೆ ೬೧/೩, ೬೧/೨, ೧೧/೨, ೧೫, ೧೮, ೨೮, ೩೨, ೩೪ ೫೭ ಮತ್ತು ೫೯ರಲ್ಲೂ ಕೀರ್ತನೆಗಳಿವೆ.

## 21

## ಕೀರ್ತನೆಗಳು

| | | |
|---|---|---|
| ನಂ : ೬/೩೨ | ಸದಾಶಿವ ಬ್ರಹೇಂದ್ರ, ತಿಮ್ಮಪ್ಪದಾಸ | ೧೦೧ ಅಕ್ಷರ |
| ೪೮×೩-೯ ಸೆಂ.ಮೀ | ಕ್ರಿ.ಶ. ಸು. ೧೮೬೦ | ೮ ಸಾಲು |
| ೩ ಪತ್ರ | ಕೀರ್ತನೆ | ಸಂಸ್ಕೃತ, ಕನ್ನಡ |

**ವಿಷಯ** : ಸದಾಶಿವಬ್ರಹ್ಮೇಂದ್ರರ ರಚನೆಗಳಿಗೆ ಕೀರ್ತನೆರೂಪದ ಅನುವಾದ

**ಆದಿ** : ಓಲೆಪುಟ ೪೬ ರಾಗ । ನವರೋಜೂ ।

ಸ್ಥಿರತಾನಹಿನಹಿರೆ ।
ಮನಸಃ ಸ್ಥಿರತಾನಹಿನಹಿರೆ ॥ಪಲ್ಲವ॥

ತಾತಪ್ರಯ ಸಾಗರ ಮಗ್ನಾನಾಂ ।
ದರ್ಪಾಹಂಕಾರಮಗ್ನಾನಾಂ ॥೧॥

ವಿಷಯ ಪಾಶವೆಷ್ಟಿತ ಚಿತ್ತಾನಾಂ
ವಿಪರೀತ ಜ್ಞಾನ ವಿಮತ್ತಾನಾಂ ॥೨॥

ಪರಮಹಂಸಯೊಗ ವಿರುದ್ಧಾನಾಂ
ಬಹುಚಂಚಲತರಸುಖಸಿದ್ಧಾನಾಂ ॥೩॥

ರಾಗಾ॥ ನವರೋಜು॥

ಖೆಲ್ಲತಿ ಮಮ ಹೃದಯೆರಾಮಃ
ಖೆಲ್ಲತಿ ಮಮ ಹೃದಯೆ ॥ಪಲ್ಲವ॥

ಮೊಹವರಾರ್ಣವತಾರಣಕಾರೀ ।
ರಾಗದ್ವೆಷಿಮುಖಾನುರಮಾರೀ ॥೧॥

ಶಾಂತಿವಿದೆಹನುತಾನಹ ಚಾರೀ ।
ದಹರಾಮೊಧ್ಯಾನಗರ ವಿಹಾರೀ ॥೨॥

ಪರಮಹಂಸ ಸಾಮ್ರಾಜ್ಯೊದ್ಧಾರೀ
ಸಕಲ ಜ್ಞಾನಾನಂದ ಶರೀರೀ ॥೩॥

ಅಂತ್ಯ : ಓಲೆಪುಟ ೪೮ (ಹಿಂಭಾಗ) ಸಾಲು ೪–೫

ಭೃತ್ಯ ಭೃತ್ಯರು ಯೆಂದು ತಿಳಿನಂಮನೀನೆರಡು ಬಗೆಯಲ್ಲೈಯ್ಯಾ ।
ನಿತ್ಯ ಸೆವಕ ನಿಧಿಪತಿನುತರಾಸ್ಯಕ್ಕೆ ನಿಂದೆವ್ವೈಯ್ಯಾ
ಉತ್ತಮ ನಾರದರಡಿಯ ಕಿಂಕರರಾದದೊಂದಿದ್ದೈಯ್ಯಾ
ಯಿತ್ತೆರದ ವಿಧಾನ ಕೊಕರಕಿಂಕರಂನಿಪಿವ್ವೈಯ್ಯಾ ॥೨೪॥

ವಿ.ವಿ : ಅಸಮಗ್ರ. ಸುಲಭಗ್ರಾಹ್ಯ, ಸದಾಶಿವ ಬ್ರಹ್ಮೇಂದ್ರರ ಸಂಸ್ಕೃತ ಶ್ಲೋಕಗಳಿಗೆ ತೆಲುಗು, ಕನ್ನಡದಲ್ಲಿ ಕೀರ್ತನೆಗಳ ರೂಪದಲ್ಲಿ ಅನುವಾದ ಮಾಡಲಾಗಿದೆ. ಹಸ್ತಪ್ರತಿ ಸಂಖ್ಯೆ ೬೧/೩, ೬೧/೨, ೧೧/೨, ೧೫, ೧೮, ೨೮, ೨೯, ೩೪,೫೭, ೫೯ ರಲ್ಲೂ ಕೀರ್ತನೆಗಳಿವೆ.

## 22

### ಕೀರ್ತನೆಗಳು

| | | |
|---|---|---|
| ನಂ. ಓ/೩೪ | ತಿಮ್ಮಪ್ಪದಾಸ ಮತ್ತು ಇತರರು | ೭೭ ಅಕ್ಷರ |
| ೩೩–೫×೩–೮ ಸೆಂ.ಮಿ. | ಸು. ೧೮ನೇ ಶತಮಾನ | ೮ ಸಾಲು |
| ೩೧ ಪತ್ರ | ಕೀರ್ತನೆ | ಕನ್ನಡ, ತೆಲುಲು |

ವಿಷಯ : ದೇವತಾಸ್ತುತಿ

ಆದಿ : ಓಲೆಪುಟ ೧೧.

ಶ್ರೀ ರಾಮಾಯನಮಃ ।ರಾಗಾ। ಬಿಲಾರಿ।
ಶರಣಾಗತ ವತ್ಸಲನೆಂದು ನಾನಿಂನ್ನ
ಚರಣವ ನೆರೆ ನಂಬಿದೆ
ಕರುಣಿಸಯ್ಯ ಮುಂನ್ನ

ಕರಿಯು ಕಾಯ್ದಂದದಿ ಕಾಕುತ್ಸ್ಥ ವಂಶ ಸೋಮಾ ಶ್ರೀ ರಾಮ ॥ಪಲ್ಲ॥

ಕಾಮ ಕ್ರೋಧ ಮೋಹ ಗಹನದ
ತಾಮಸಗುಣ ಸಂಧಾನನಾಗಿ
ಭಾಮಿನಿ ಸುತರೆಂಬ ಭ್ರಾಂತಿಗೆವಳಗಾದ
ಪಾಮರನೆಂನಸು ಪರಿಪಾಲಿಸು ಸ್ವಾಮಿ ॥೧॥

ಅಂತ್ಯ : ಓಲೆಪುಟ ೨೩ ಸಾಲು ೬

ರಾಗಾ ॥ಬೈರವಿ॥
ಶ್ರೀ ಗುರುವಚನಕಿಂತಧಿಕ ಸುಧೆಯುಂಟೆ
ರಾಗದಿಂದ ಬೆರೆಭವಬೀಜವೆಂಬುದು ॥ಪಲ್ಲ॥
ನರಜನ್ಮ × ದಿಂದಹದೊಳು ಮಿಗಿಲುಂಟೆ
ಕರಣ ವಿಜಯದಿಂದೆ ಕವಿತನಲುಂಟೆ
ಧರೆಗೆ ಯಾಚನೆಯಿಂದೆ ಲಘು ತರ ಉಂಟೆ ।
ಪರಬ್ರಹ್ಮದರಿವಿನಿಂದರಿವಜ್ಞಾಣುಂಟೆ ॥೧॥

ವಿ.ವಿ : ಅಸಮಗ್ರ ; ೧೧ನೇ ಗರಿಯಿಂದ ೨೩ನೇಗರಿಯವರೆಗೆ ಇದೆ. ಬರಹ ಸ್ಫುಟವಾಗಿದೆ, ಕೊನೆಯಗರಿಯ ಕೊನೆಯ ಎರಡು ಕೀರ್ತನೆಗಳಿಗೆ ಮಸಿಲೇಪನವಿಲ್ಲ. ೧೩ ಮತ್ತು ೧೬ನೇ ಗರಿಗಳು ಇಲ್ಲ. ಸದ್ಗುರು ಶಂಕರ, ರಾಮದಾಸ, ಬ್ರಹ್ಮಾನಂದ ಗುರು, ಬಲಭದ್ರವರದ, ಚಿಕನಾಗಪುರನಿರಶಿಶಯ, ಅಲಮೇಲುಮಂಗ, ವೆಂಕಟಸ್ವಾಮಿ, ಸದ್ಗುರು ಶೇಷಾಚಲದೇವ, ಗುರುಶಂಭುಲಿಂಗ' ಮುಂತಾದ ಅಂಕಿತಗಳು ಕಂಡು ಬರುತ್ತವೆ. ಅಲ್ಲಲ್ಲಿ ತೆಲುಗು ಕೀರ್ತನೆಗಳು ಇವೆ ಲಿಪಿಯ ದೃಷ್ಟಿಯಿಂದ ತಿಮ್ಮಪ್ಪ ದಾಸರ ಕೈ ಬರಹ ಎನ್ನಬಹುದು. ತಿಮ್ಮಪ್ಪದಾಸರ ಕೀರ್ತನೆಗಳೂ ಕೆಲವು ಇವೆ. ಹಸ್ತಪ್ರತಿ ಸಂಖ್ಯೆ ೬೧/೩, ೬೧/೨, ೧೧/೨.೧೫, ೧೮, ೨೮, ೨೯, ೩೨, ೫೭, ೫೯ ರಲ್ಲೂ ಕೀರ್ತನೆಗಳಿವೆ.

23

## ಕೀರ್ತನೆಗಳು

| | | |
|---|---|---|
| ನಂ. ೬/೫೭ | ತಿಮ್ಮಪ್ಪದಾಸ | ಅಷಿ ಅಕ್ಷರ |
| ೩೯ × ೩–೨ ಸೆಂ.ಮಿ. | ಕ್ರಿ.ಶ. ಸು. ೧೮೬೦ | ೭ ಸಾಲು |
| ೭ ಪತ್ರ | ಕೀರ್ತನೆ | ಕನ್ನಡ, ಸಂಸ್ಕೃತ |

**ವಿಷಯ :** ತತ್ವಾರ್ಥ ಕೀರ್ತನೆಗಳು

**ಮಾದರಿ :** ಆರಂಭಗರಿಯ ಹಿಂಭಾಗದಲ್ಲಿ–ಸಾಲು ೨

ಗರ್ವಿಸುವದು ಥರವೆ
ಗರ್ವಿಸುವದು ಥರವಲ್ಲ, ನೀವಿದ ಕೇಳಿ
ಸರ್ವೆಶನೊಪ್ಪ ನೀನಡತೆಯು ಕಂಡರೆ ॥ಪಲ್ಲ॥

ಬೆಲ್ಲವೆ ಬಾನಾಸು ತುಗುರಿಬೆಳೆಯುನನ
ಗುಲ್ಲಾ ಸಹಂದೊಂದು ಯೋಚನೆ ತೊರಿತು
ಯಲ್ಲರು ವಬ್ಬಟ್ಟು ವಳ್ಳಿತೆಂದೆಂಬರು
ಬಲ್ಲವರಾದರೆ ವಿವರಿಸ × ರುವರೆ........

೪ನೆಯ ಓಲೆಯ ಪುಟದಲ್ಲಿ ಸಾಲು–೫

ಕರುಣ ನಾಗಪುರವಾಸ
ಪರಮ ಪುರುಷ ವೆಂಕಟೆಶ
ಗುರುವಾಸುದೆವಾರ್‍ಯ × × × ಳೈಯ
ಶ್ರಿಶ್ರಿ ತರಳನಾನು ತಿಂಮದಾಸ
ಅರಿಯೆನ್ನೈ ಸಂಸಾರ ಕ್ಲೆಶ
ಹರದು ಹೊಗುವಂತೆ
ಕರುಣಿಸೊ ದಯದಿಂ ಸರ್ವೆಶ ॥೫॥

**ವಿ.ವಿ. :** ಅಸಮಗ್ರ, ಬರಹ ಸ್ಫುಟವಾಗಿದೆ. ಪುಟಸಂಖ್ಯೆಯಿಲ್ಲದ ಕೊನೆಯ ಗರಿಯಲ್ಲಿ ೧೧ ಸಾಲುಗಳಿವೆ. ಈ ಕಟ್ಟಿನಲ್ಲಿರುವ ಓಲೆಗಳಲ್ಲಿ ೧, ೪ನೇ ಗರಿಗಳ ಮುಂಭಾಗದಲ್ಲೂ, ೩, ೫, ೯ ಮತ್ತು ಕೊನೆಯ ಗರಿಯ ಹಿಂಭಾಗದಲ್ಲೂ ನಾಗರಿ ಲಿಪಿಯ ಗ್ರಂಥವಿದೆ. ಹ.ಪ್ರ.ಸಂ. ೬೧/೩ ; ೨, ೧೧/೨, ೧೫, ೧೮, ೨೮, ೨೯, ೩೨, ೩೪ ಮತ್ತು ೫೯ ನೇ ಗ್ರಂಥಗಳಲ್ಲೂ ಕೀರ್ತನೆಗಳಿವೆ.

## 24

## ಕೀರ್ತನೆಗಳು

| | | |
|---|---|---|
| ನಂ. ೬/೫೯ | ತಿಮ್ಮಪ್ಪದಾಸ | ೭೦ ಅಕ್ಷರ |
| ೩೯–೩ × ೩ ಸೆಂ.ಮಿ. | ಸು. ಕ್ರಿ.ಶ. ೧೮೬೦ | ೫ ಸಾಲು |
| ೫ ಪತ್ರ | ಕೀರ್ತನೆ | ಕನ್ನಡ |

**ವಿಷಯ :** ದೇವತಾಸ್ತುತಿ

**ಆದಿ :** ಓಲೆಪುಟ : ೧ ಶ್ರೀರಾಮಾಯನಮಃ ರಾಗಾ॥

ಭಕ್ತಿ ಹೆಚ್ಚು । ಭಕ್ತಿ ಹೆಚ್ಚು । ಭಕ್ತಿ ಹೆಚ್ಚು
ಮುಕ್ತಿಯ ರಸವೆಲ್ಲ ಭಕ್ತಿಯೊಳಿರಲು । ಭಕ್ತಿ ಹೆಚ್ಚು ॥ಪಲ್ಲ॥

ಯತಿಗಳಂದವೆ ಭಕ್ತಜನರು ನಿಂನ
ಮತವನೆ ಮಂನಿಸುತಿಹರು
ಯತನ ತತ್ವರತಿಶಿವರರೂ × ಗತಿ
ಯುತರಾಗರದರಿಂದು ಅತಿ ಬಳಲುವರೂ ॥೧॥

ರಾಗಾದಿದೊಷರಹಿತರುಯೆಂಬ
ಯೋಗದಿಂದಲೆ ಯೊಗ್ಯರವರು
ಯೊಗಾಧೀಶನೆ ಭಕ್ತಜನರೂ ಭಕ್ತಿ
ರಾಗದಿ ಬಂಧಿಸಿ ಬಿಗಿವಡದಿಪರು ॥೨॥

**ಅಂತ್ಯ :** ಓಲೆಪುಟ ೫ (ಹಿಂಭಾಗ)

ಯಿರವ ತೊರಿಸಿ । ನಂಮ ಭ್ರಾಂತಿಯ
ಪರಿಹರಿಸು ವ್ಯಾಪಿಸು ನಿಂನ ಕೀರ್ತಿಯ ।ಪಾಪ
ಹರವೆನಿಸೆಂಮಯ ವಾರ್ತೆಯ । ದೆವ ।
ತಿರುಪತಿನಿಲಯ ಶ್ರಿ ವೆಂಕಟರಮಣನೆ । ॥೬॥

ಚರಣ ಕಮಲವ ನೀನೆ । ಉರದಲ್ಲಿ ।
ಯಿರಿಸು ದಯಾವರಸಿ । ತಾವಿ ।
ಹರೆಯಲಿ ಶಶಿಮುಖನೆ । ಕೃಪಾಕರನೆ ।
ಅರಸು ನಮಗೆ ನೀನೆ ಶ್ರೀನಾಥನೆ ॥೭॥

**ವಿ.ವಿ. :** ಅಸಮಗ್ರ, ಶ್ರೀ ತಿರುಪತಿ ವೆಂಕಟರಮಣನ ಅಂಕಿತವಿದೆ. ಹಸ್ತಪ್ರತಿ ಸಂಖ್ಯೆ ೬೧/೩;೨, ೧೧/೨, ೧೫, ೧೮, ೨೮, ೨೯, ೩೨, ೩೪, ೫೭ನೇ ಗ್ರಂಥಗಳಲ್ಲೂ ಕೀರ್ತನೆಗಳಿವೆ.

## 25

## ಕೃಷ್ಣ ಚಾರಿತ್ರ

| | | |
|---|---|---|
| ನಂ. ೨೧/೧ | ನಿತ್ಯಾತ್ಮ ಶುಕಯೋಗಿ (ಚಾಟು ವಿಠಲನಾಥ) | ೭೫ ಅಕ್ಷರ |
| ೩೩-೩ × ೫-೬ ಸೆಂ.ಮಿ. | ಕ್ರಿ.ಶ. ೧೫೩೦ | ೯-೧೦ ಸಾಲು |
| ೭ ಪತ್ರ | ಷಟ್ಪದಿ, ಶ್ಲೋಕ | ಕನ್ನಡ, ಸಂಸ್ಕೃತ |

**ವಿಷಯ :** ಗೋಪಿಕಾಗೀತೆಟೀಕು.

**ಆದಿ :** ಓಲೆಪುಟ ೬೫. (ಬದಿಯಲ್ಲಿ) ಗೋಪಿಕಾಗೀತೆಟೀಕೂ ॥ ಕ್ರಿಷ್ಣಚಾರಿತ್ರೆ ॥

ಶ್ರೀ ಮಹಾಗಣೇಶ್ವರ ಶಾರದಾಗುರುಭ್ಯೋ ನಮಃ ॥ ಶ್ರೀ ನಾರದರೃಶಿಭ್ಯೋ ನಮಃ ॥ ವೇದವ್ಯಾಸಾಯ ನಮಃ ॥ ಶ್ರೀ ಶುಕಯೋಗೀಂದ್ರಾಯ ನಮಃ ॥ ಶ್ರೀ ಕೃಷ್ಣ ಯೋಗೀಂದ್ರ ಸ್ವಾಮಿನೇನಮಃ॥ ಶ್ರೀ ರಾಮವರದ ಗುರುವೇನಮಃ

ಅರಿದಲಾಮಾನುಷ್ಯವದರೊಳ
ಗರಿದು ಭಾರತ ವರುಷ ಸಂಭವ
ವರಿದುಮತ್ತದರೊಳಗೆ ವಿಪ್ರತೆಯಾದರದರೊಳಗೇ ॥
ಹರಿಪರಾಯಣರೆನಿಪಸತ್ಪುರು
ಷರವಿಸಂಗತಿ ತಂನ್ಮುಖೋದ್ಗತ
ಹರಿಕಥಾಮ್ರುತಪಾನವತಿದುರ್ಲ್ಲಭವಲಾಯೆಂದಾ ॥

**ಅಂತ್ಯ :** ಓಲೆಪುಟ : ೭೭ ಹಿಂಭಾಗ ಸಾಲು ೬

ಯೇಕಿ ತನಗೆ ಪುರಾಣ ಶಾಸ್ತ್ರಾ
ನೀಕ ಸಂಗ್ರಹವೆಂಬ ಶುಕನನು
ಸೋಕಿ ಸೆಳೆದುದು ನಿಜದಲಡಗಿದ ಚಿತ್ತವ್ರುತ್ತಿಯಲಿ ॥
ಶ್ಲೋಕ ವಂದಧ್ಯಾಯವಂದೇ
ಸಾಕೆನುತ್ತರ್ಥವನು ಸಕಲವ
ನಾಕೃತಜ್ಞನು ಕಲಿತಸೀ ಭಾಗವತ ಸಂಹಿತೆಯಾ ।

**ವಿ.ವಿ. :** ಸಮಗ್ರ ; ಇದು ಇದೇ ಕವಿಯ ಭಾಗವತದ ಒಂದು ಭಾಗವಿರುವಂತಿದೆ. ಅಕ್ಷರ ಸ್ಪಷ್ಟವಾಗಿ ಸುಂದರವಾಗಿದೆ. ೭೨ನೇ ಗರಿಯ ಮೊದಲೆರಡು ಸಾಲುಗಳ ಗರಿ ತ್ರುಟಿತವಾಗಿದೆ. ಇದೇ ಕಟ್ಟಿನಲ್ಲಿ ಅನಭವಾಮೃತ ಗ್ರಂಥವೂ ಇದೆ.

## 26

## ಕೃಷ್ಣದೇವರಾಯ ದಿನಚರಿ

| | | |
|---|---|---|
| ನಂ. ಓ/೭೩ | ಮುಕ್ಕುತಿಮ್ಮಯ್ಯ (?) | ೩೫ ಅಕ್ಷರ |
| ೨೨×೪-೭ ಸೆಂ.ಮಿ. | ಸು. ಕ್ರಿ.ಶ. ೧೫೩೯ | ೯ ಸಾಲು |
| ೬೩ ಪತ್ರ | ಗದ್ಯ | ಕನ್ನಡ |

**ವಿಷಯ :** ಶ್ರೀ ಕೃಷ್ಣದೇವರಾಯನ ಯುದ್ಧಗಳ ವಿವರ.

**ಆದಿ :** ಓಲೆಪುಟ ೧

ಶ್ರೀಮತೆ ರಾಮಾನುಜಾಯನಮಃ ॥ ಕೃಷ್ಣರಾಯರ ದಿನಚರಿಯ ಕೃತ್ಯಗಳ ವಿಸ್ತಾರ ॥ × × × ಶ್ರಿ ವಿದ್ಯಾನಗರದಲ್ಲಿ ಕೃಷ್ಣರಾಯರು ॥ ವಿದ್ಯಾನಗರದಲ್ಲಿ ವಿರನೃಸಿಂಹ ರಾಯರವರು । ಬ್ರಾಹ್ಮೀ ಮುಹೂರ್ತದಲ್ಲಿ ಯೆದ್ದು । ಆದ್ಯರ ನಾಮಾವಳಿಗಳಂನ್ನು । ಅಧ್ಯಾತ್ಮ ಸಂಕಿರ್ತನೆಗಳಂನು ॥ ಪಾಂಡವ ವನಿತೆಯುಂನ್ನು ॥ ಗಜೇಂದ್ರ ಮೋಕ್ಷ ವಂನ್ನು । ಭರತ ಸಾವಿತ್ರಿಯಂನ್ನು ॥ ಭಾಗವತವಂನು । ಮುಚುಕುಂದಸ್ತೋತ್ರ ಮೊದಲಾದವಂನೂ । ಸಂಜಯ ನೀತಿ । ವಿದುರ ನೀತಿ । ಚಾಳುಕ್ಯ ನೀತಿ । ವೈರಾಗ್ಯ ಶತಕ ನೀತಿ ಶತಕ। ವಧ್ಯ ನೀತಿ ಮೊದಲಾದಂಥಾರಾಜ ನೀತಿಗಳನ್ನು ಕೇಳಿದಂಥಾವರಾಗಿ.

**ಅಂತ್ಯ :** ಓಲೆಪುಟ ೬೩ (ಹಿಂಭಾಗ)

ಕೃತಿಯಲ್ಲಿ । ಕೋಂಗರವರ ಪ್ರಸಂಗ ಪ್ರತಾಪಗಳು ಯಲ್ಲರಿಗು ಯಣಿಸಲಾಯಿತು । ಆದರಿಂದಾ ತಾಉೂ ಕೃತಿಯ ಹೆಳಿಸಬೇಕುಯಂದು ಅಪ್ಪಣೆಯಂನ್ನು ಕೊಟ್ಟು । ಮುಕ್ಕು ತಿಂಮೈಯ್ಯ । ಮಾರೈಯನವರ ಮಲ್ಲೈಯ್ಯನವರು ಮೊದಲಾದವರಂನು ಕೃತಿಯ ಹೇಳಕೊಂಡು ಬರಹೇಳಿ ಅಪ್ಪಣೆ ಕೊಟ್ಟರು । ಯಿದೂ ಯಿಂದಿನವರೆಗೆ ನಡೆದ ಪ್ರವರ್ತ್ತಕಗಳು । ಯಿಂನು ಮೇಲೆ ನಡವ ವರ್ತಮಾನಗಳಿಗೆ ಬಿಂನಹ ಮಾಡಿ ಕಳುಹಿಸಿನು ಚಿತ್ತಕೆ ಪರಾಮರಿಸಿಕೊಳ್ಳ ಚಿತ್ತೈಸೂದು ಇಂತಿ ಬಿನ್ನಹ.

**ವಿ.ವಿ. :** ಸಮಗ್ರ ; ಲಿಪಿ ಓದಲು ಸುಲಭ ಗ್ರಾಹ್ಯ. ಗ್ರಂಥದಲ್ಲಿ ವಿಜಯನಗರ ಸ್ಥಾಪನೆಯ ಕಾಲ, ಕೃಷ್ಣದೇವರಾಯ ಪಟ್ಟಕ್ಕೆ ಬಂದ ಕಾಲ ಮತ್ತು ತೀರ್ಥ ಕ್ಷೇತ್ರ ಗಳನ್ನು ಕೃಷ್ಣದೇವರಾಯ ಭೇಟಿ ಮಾಡಿದ ಕಾಲಗಳ ಉಲ್ಲೇಖಗಳಿವೆ.

## 27

## ಕೃಷ್ಣಾಷ್ಟೋತ್ತರ ಶತನಾಮಾಭಿರ್ನಾಕ್‌ಪುಷ್ಪ ಪೂಜಾ

| | | |
|---|---|---|
| ನಂ. ಓ/೪೩/೧ | ತಿಮ್ಮಪ್ಪದಾಸ | ೧೦೪ ಅಕ್ಷರ |
| ೪೭ × ೩–೮ ಸೆಂ.ಮೀ | ಸು. ಕ್ರಿ.ಶ. ೧೮೬೦ | ೮ ಸಾಲು |
| ೪೦ ಪತ್ರ | ಕೀರ್ತನೆ | ಕನ್ನಡ |

**ವಿಷಯ :** ಪೂಜಾ ವಿಧಾನದ ಕೀರ್ತನೆಗಳು ಮತ್ತು ಗುರುಸ್ತುತಿ (ಶ್ರೀ ಕೃಷ್ಣನ ಅಷ್ಟೋತ್ತರ ಶತ ನಾಮಾವಳಿಯ ಒಂದೊಂದು ನಾಮಕ್ಕೂ ಒಂದೊಂದು ಕೀರ್ತನೆ)

**ಆದಿ :** ಓಲೆಪುಟ ೧ (ಬದಿಯಲ್ಲಿ) [ವಾಸು]ದೆ[ವಾಯ]ರ್ರು ನಿ[ರೂಪಿ]ಸಿದ ಕೀ[ರ್ತನೆ]

ಶ್ರೀ ಗಣನಾಥ ಶಾರದಾ ಗುರುಃಭ್ಯೋನಮಃ ॥ ಶ್ರೀ ಲಕ್ಷ್ಮೀ ವೆಂಕಟೇಶಾಯ ನಮಃ ॥ ಶ್ರೀ ವಾಸುದೇವಾಯ ನಮಃ । ಶ್ರೀ ರಾಮಾಯ ನಮಃ ॥

॥ ರಾಗ ನಾಟಿ ॥
ಕೊಡು ಮತಿಯ ಗಣನಾಥ
ಪೊಡಮಡುವೆ ನಿಂನಡಿಗೆ
ಜಡಮತಿಯ ಕಡೆಗೊಳಿಸಿ ಮೃಡತನಯ ಸಲಹು ॥

ಮೃಡನೆನಲು ಸುಖರೂಪನೊಡನಿಪ್ಪ ಮತಿ ಮೃಡನು
ಜಡ ತಾನು ಕಲ್ಪಿತಉ ಬಿಡಿಸಿದನು ನೀನು
ಕೊಡು ಮತಿಯನೂ ॥ಪಲ್ಲ॥

ಮೃಡತನಯನೆಂಬೆರಡು ಶಬ್ದದರ್ಥವನೊಡೆ
ಯೆಡೆಬಿಡದ ಸುಖರೂಪನೆಂಬರ್ಥವಿಹುದೂ
ವಡಲು ಮೃಡನಿಗೆ ನೀನು ಕಡೆಗೆ ಮೃಡನೀನಾದೆ
ನಡುವೆ ಜಡನಾದೆಂನ ಮೃಡನ ಮಾಡೈಯ್ಯಾ ॥೧॥

**ಅಂತ್ಯ :** ಓಲೆಪುಟ : ೩೨ (ಹಿಂಭಾಗ) ಸಾಲು ೫.

ಓಂ ಪರಾತ್ಪರಾಮನಮಃ ॥೧೦೮॥ ಕಂ ॥
ಮಂಗಳ ಮಂಗಳ ಮಹಿಮಗೆ
ಮಂಗಳ ಮಾರಮಣೀಧರಣೀವಲ್ಲಭನಿಗೆ ।

ಮಂಗಳ ತಿರುಪತಿಯರಸನಿಗೆ
ಮಂಗಳಗುರುವಾಸುದೇವಗೆ । ವೆಂಕಟರಮಣಗೆ ।

ಈ ವಾಕ್ಪುಷ್ಪಗಳಿಂ ವಾಸುದೇವನಂದನನ ಚರಣ ಕಮಲಗಳನುತಿ ಭಾವಿಸಿ ಪೂಜಿಸಿ ತಿರುಪತಿ ದೇವನ ಸಂತುಷ್ಟಿಯಿಂ ರಕ್ಷಿಪ ಭಕ್ತರನೂ ॥ ಶ್ರೀ ಗೋಪಾಲಕೃಷ್ಣ ಸ್ವಾಮಿಯೆ ನಮಃ ॥ ಕೃಷ್ಣಾಷ್ಟೋತ್ತರ ಶತನಾಮಾಭಿರ್ವಾಕ್ಪುಷ್ಪ ಪೂಜಂ ಸಮರ್ಪಯಾಮಿ ॥ ಅಂತೂ ಕೀರ್ತನೆಗಳು ೧೦೨ಕ್ಕಂ ಪದನು ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ॥

**ವಿ.ವಿ. :** ಸಮಗ್ರ ; ಅಕ್ಷರ ಸ್ಫುಟವಾಗಿ, ಸುಂದರವಾಗಿವೆ. ೧೦, ೧೫ನೇ ಗರಿಗಳು ಇಲ್ಲ. ೧೯ನೇ ಗರಿ ತ್ರುಟಿತವಾಗಿದೆ. ಹಲವು ಗರಿಗಳ ಬದಿಯಲ್ಲಿ ವಾರಗಳ ಹೆಸರುಗಳು, ರಾಮಾಯಣ, ಭಾರತ, ಭಾಗವತ ಎಂದು ಮತ್ತು ಕೀರ್ತನೆಗಳ ಮೊದಲ ಪದಗಳನ್ನು ಬರೆದಿದೆ. ಪ್ರತಿಯೊಂದು ಕೀರ್ತನೆ ಮುಗಿದಮೇಲೂ ಶ್ರೀ ಕೃಷ್ಣನ ಅಷ್ಟೋತ್ತರ ಶತ ನಾಮಾವಳಿಯ ಒಂದೊಂದು ನಾಮಾಂಕಿತವನ್ನು ಬರೆದಿದೆ. ಇದೇ ಕಟ್ಟಿನಲ್ಲಿ 'ಉದಯರಾಗ' ಮತ್ತು 'ಕಾಯಜೀವ ಸಂವಾದ' ಕೀರ್ತನೆಗಳೂ ಇವೆ.

## 28

## ಗರಳಪುರಿ ಮಹಾತ್ಮೆ

| | | |
|---|---|---|
| ನಂ. ೬/೭೧ | ? | ೩೭ ಅಕ್ಷರ |
| ೩೬×೩–೨ ಸೆಂ.ಮಿ. | ? | ೪ ಸಾಲು |
| ೬೩ ಪತ್ರ | ಶ್ಲೋಕ | ಸಂಸ್ಕೃತ |

**ವಿಷಯ :** ಪರಶುರಾಮ ಕಥೆ.

**ಆದಿ :** ಓಲೆಪುಟ ?

× × ಶ್ರೀಮಸ್ಕಾಂದೆ ನಂಜುಂಡೇಶ್ವರ ಪ್ರಸಂನ ಪುರಾಣೆ ಗರಳಪುರನಾಥ ಮಾಹಾತ್ಮ್ಯ ಶ್ರೀ ಕಂಠೇಶ್ವರ ಭಕ್ತ ಶ್ರಿ ಪರಶುರಾಮ ಮಹಿಮವ × × × × ಮ

ದಶಮಾಧ್ಯಾಯಃ ॥೧೦॥ ಶ್ರಿ ಋಷಯಃ । ಸಂಮ್ಯಗುಕ್ತಂ ಮುನಿಶ್ರೇಷ್ಠ ರಾಮಸ್ಯ ತಪಸಸ್ಥಳಂ । ಗೌತಮೆ ನಾಪಿತತ್ಕ್ಷ × × × ಮಾಶ್ರಿತಮಿತಿ ಪ್ರಭೊ ॥ಸೂತಃ॥ ತ್ವಯೋಕ್ತಂ ಮಹಾದಸ್ಮಾಕಂ ವಕ್ತುಮರ್ಹಸಿ ತತ್ವತಃ ॥ ಶ್ರೀ ಸೂತಃ ॥ × × × ತಛ್ರುತ್ವಾ ಮುನಿವರ್‍ಯೊಪಿ ಪ್ರೋವಾಚ ಪರಯಾಮುದಾ । ಪುರಾಶತಕ್ರತು ಭಾರ್ಯಮೌ ಗೌತಮಾಶ್ರಮಮಾಯಯೌ ॥ × × × ×

**ಅಂತ್ಯ :** ಓಲೆಪುಟ ?

× × × ತಿಚ । ತ್ರಿಕೂಟಂತು ಗಜಾರಣ್ಯಂಭುವಿಕ್ಷಿತ್ರಾಣಿಸಂತಿಮೆ ॥ ಕ್ಷೆತ್ರಾಣಾಮುತ್ತಮಂ ಸಂಮಹತ್ತರಂ । ಮಮ ಪ್ರತಿಕರಂ ಸುಭ್ರುಭುಕ್ತಿ ಮುಕ್ತಿ ಫಲಪ್ರದಂ ॥ ಸಹ್ಯಾಜಾದಕ್ಷಿಣೆ ದೆಶೆ.

ಶ್ರಿ ಪರಶುರಾಮಾಯನಮಃ । ಯಾದೃಶೀ ಭಾವನಾಯತ್ರ ಸಿದ್ಧಿರ್ಭವತಿ ತಾದೃಶೀ । ಅಬದ್ಧಂ ವಾ ಸುಬದ್ಧಂ ವಾ ಮಮ ದೋಷೊ ನ ವಿದ್ಯತೆ ॥ ಕರಕೃತಮಪ ರಾಧಂ ಕ್ಷಂತುಮರ್ಹಂತಿ ಸಂತಃ ಶ್ರೀ ಗರಳಪುರೀಶ, ಶ್ರೀಗರಳ ಪುರೀಶಾಯನಮಃ, ಶ್ರೀ ಕಂಠಾಖ್ಯ ಸದಾಶಿವಸ್ಥಳ ಮಹಾ ಮೈತ್ನಾ ಕರೋತಿ ಶ್ರೀಯಂ । ಸ್ಕಾಂದ ಪರಶು ರಾಮ ಪುರಾಣೆ ಗರಳಪುರಿನಾಥ ಮಾಹಾತ್ಮ್ಯೆ........

**ವಿ.ವಿ. :** ಅಸಮಗ್ರ; ಓಲೆಗಳು ತುಂಬಾ ಶಿಥಿಲವಾಗಿವೆ. ಓಲೆಗಳಿಗೆ ಪುಟ ಸಂಖ್ಯೆ ಯಿರುವ ಭಾಗ ಹಾಳಾಗಿದೆ. ಕೆಲವು ಗರಿಗಳಲ್ಲಿ ರೇಖಾಚಿತ್ರವಿದೆ. ಬಹಳಷ್ಟು ಗರಿಗಳು ತ್ರುಟಿತವಾಗಿವೆ. ಕೆಲವು ಗರಿಗಳಲ್ಲಿ ೧, ೨, ಸಾಲುಗಳನ್ನು ಬರೆದಿದೆ. ಇನ್ನು ಕೆಲವು ಗರಿಗಳ ಬಹುಭಾಗ ತೆರವು ಇದೆ.

29

## ಗ್ರಹಣ ಶ್ರಾದ್ಧ ನಿರ್ಣಯ

| | | |
|---|---|---|
| ನಂ. ಓ/೫೪/೨ | ? | ೩೮ ಅಕ್ಷರ |
| ೨೬-೫ × ೫-೨ ಸೆಂ.ಮಿಾ. | ? | ೧೨ ಸಾಲು |
| ೩ ಪತ್ರ | ಶ್ಲೋಕ | ಸಂಸ್ಕೃತ |

**ವಿಷಯ :** ಶ್ರಾದ್ಧ ಮಂತ್ರಗಳು.

